# ಓದುಗರೊಡನೆ

'ಮನೆ ಕಟ್ಟಿಸಿ ನೋಡು, ಮದುವೆ ಮಾಡಿ ನೋಡು' ಎಂಬ ಗಾದೆ ಮಾತು ಅಪೂರ್ಣವೆಂದು ನಮಗೀಗ ತಿಳಿಯಿತು. ಇದಕ್ಕೆ 'ಮಾಲೆ ಹೊರಡಿಸಿ ನೋಡು' ಎಂಬುದೂ ಸೇರಿದರೆ ಸರಿಯಾದೀತು. ಹೂಮಾಲೆಗೆ ತಲೆಬಾಗುವ ದೆಷ್ಟು ಸುಲಭವೋ ಸಾಹಿತ್ಯಮಾಲೆಯ ಸಂಪಾದಕನಾಗಿರುವದು ಅಷ್ಟೆ ಕಷ್ಟ! ಕಾಗದ ಕೊಳ್ಳಲು ಬಿಳೀಸಂತೆ ಎಲ್ಲಿದೆ ಎಂಬುದೇ ತಿಳಿಯದಂತಾದಾಗ, ಅಚ್ಚಿನ ಅನಾನುಕೂಲತೆ ಅಳತೆ ಮೀರಿರುವಾಗ, ಅಂಚೆವೆಚ್ಚದಲ್ಲಿಯ ಹೆಚ್ಚಳವೂ ಇನ್ನೊಂದು ಕಡೆಯಿಂದ ಚುಚ್ಚುತ್ತಿರುವಾಗ ಈ ಸುಭಿಕ್ಷ ಕಾಲದಲ್ಲಿಯೆ ಪ್ರಕಟವಾಗಬೇಕೆಂಬ ಹಟವೇಕೊ ತಿಂಮುತನಕ್ಕೆ ? ಬಾ ಎಂದಾಗ ಬರುವಂತಿಲ್ಲ, ಬೇಡವೆಂದಾಗ ಬಿಡುವಂತಿಲ್ಲ; ಆದಕ್ಕೇ ಮತ್ತೆ ತಿಂಮುಸಿಗೆ ತಿಂಮ ಎನ್ನುವದು. ತಿಂಮನ ಮತ್ತು ತಿಂಮುಪ್ರೇಮಿಗಳ ಮಧ್ಯ ನಿಲ್ಲುವ ಪಾಪಿಯಾಗ ಬಾರದೆಂದು ಮಧ್ಯಮ ಕರ್ಮಾರ್ಥಿಯಂತೆ ಹಿಡಿದ ಕಾರ್ಯವನ್ನು ಮಾಡುತ್ತಿದ್ದೇವೆ; ತಿಂಮೇಚ್ಛೆಗೆ ತಲೆಬಾಗಿದ್ದೇವೆ.

ವರ್ಷದಲ್ಲಿ ಮೂರು ಗ್ರಂಥಗಳನ್ನು ಪ್ರಕಟಿಸುವ ಗುತ್ತಿಗೆ ಹೊತ್ತಿದ್ದೇವೆ, ಪ್ರಕಟಿಸಿದ್ದೇವೆ ಕೂಡ. ಆದರೆ ಜುಲೈಯಲ್ಲಿ ಬರಬೇಕಿದ್ದ ಮೂರನೆಯ ಪುಸ್ತಕವು ಸಪ್ಟಂಬರದಲ್ಲಿಯೇ ಹೊರಬಿದ್ದಿತು. ಈ ತಪ್ಪನ್ನು ತಿದ್ದಿಕೊಳ್ಳಲು ಇನ್ನೊಂದು ತಪ್ಪನ್ನು ಮಾಡಿದ್ದೇವೆ. ನೊವೆಂಬರಕ್ಕೆ ಬಂದರೆ ಸಾಕಾಗಿದ್ದ 'ಹನ್ನೊಂದನೆ ಅವತಾರ'ವನ್ನು ಅಕ್ಟೋಬರದಲ್ಲಿ ಓದುಗರ ಮುಂದಿಕ್ಕಿದ್ದೇವೆ. ಇದು ನಮ್ಮ ಮಾಲೆಯ ಎರಡನೆ ವರ್ಷದ ಮೊದಲ ಮುತ್ತು. ಸಮಯಕ್ಕೆ ಸರಿಯಾಗಿ ಹನ್ನೊಂದನೆ ಅವತಾರವನ್ನು ತೋರಿದ ಶ್ರೀ ಬೀಚಿಯವರ ಈ ಹೊತ್ತಿಗೆಯನ್ನು ನಮ್ಮ ಕನ್ನಡ ಬೃಂದವು ಸ್ವಾಗತಿಸುವದೆಂದು ನಂಬಿದ್ದೇವೆ.

ಈ ಒಂದು ಉಪಕಾರ ಸ್ಮರಣೆಯನ್ನು ಮಾಡದಿದ್ದರೆ ಸತ್ಯವು ಮುಕ್ಕಾದಂತೆಯೇ. ಕನ್ನಡ ಕಡುಗಲಿಗಳಾದ ಶ್ರೀಯುತರಿಬ್ಬರು— ಬದನೆಹಾಳು ರಂಗನಗೌಡರು ಮತ್ತು ಎಮ್ಮಿಗನೂರಿನ ಗಾದಿಲಿಂಗನಗೌಡರು— ಈ ಪುಸ್ತಕ

ಪ್ರಕಟನೆಯ ಸಂಪೂರ್ಣ ಒಜ್ಜೆಯನ್ನು ಹೊತ್ತು ತಿಮ್ಮನ ಹನ್ನೊಂದನ ಅವತಾರಕ್ಕೆ ಕಾರಣರಾಗಿದ್ದಾರೆ. ಇವರಿಗೆ ನಾವು ಋಣಿ ಎಂದರೆ ಏನು ಮಹಾ ಹೇಳಿದಂತಾಯಿತು ?

ನಮ್ಮ ಮುಂದಿನ ಗ್ರಂಥ—'ಇನ್ನೂ ಗೊತ್ತಿಲ್ಲ'! ಕೊಂಚ ಮುಗಿಲು ನೋಡುವಂತಾಗಿದೆ ಎಂದರೂ ತಪ್ಪಲ್ಲ. ಆದಷ್ಟು ವಿಡಂಬನ ಸಾಹಿತ್ಯವನ್ನ ಒದಗಿಸಬೇಕೆಂಬ ವಿಚಾರವಿದೆ. ಆದರೆ ಹಾಸ್ಯವನ್ನು ಕೊಡುವ ಹಟದಲ್ಲಿ ಕಸವನ್ನೆಂದೂ ಕೊಡಬಾರದೆಂಬ ದೃಢ ಸಂಕಲ್ಪವೂ ಇದೆ. ಈ ಕ್ಷೇತ್ರದಲ್ಲಿ ನಾವು ಅರಿತಂತೆ ಬರೆಹಗಾರರೇ ಬಹಳಿಲ್ಲ. ಇದ್ದರೂ ಇರಬಹುದು, ನಮಗೇ ಗೊತ್ತಿರಲಿಕ್ಕಿಲ್ಲ. ಹುಡುಕಿ ತೆಗೆಯುತ್ತಲಿದ್ದೇವೆ ಈ ರತ್ನಗಳನ್ನು. ಈಗಾಗಲೆ ಹಲವು ಲೇಖಕರ ಹಸ್ತಪ್ರತಿಗಳೂ ಬಂದಿವೆ; ನಮ್ಮ ಸಂಪಾದಕ ಮಂಡಲಿಯ ದುರ್ಬೀನಿನ ಬುಡದಲ್ಲಿ ಕುಳಿತಿವೆ. ಇಲ್ಲವಾದರೆ ಶ್ರೀ ಬೀಚಿಯವರ 'ದೇಭನ ದಶಾವತಾರ,' 'ದಾಸಕೂಟ' ೨ನೆ ಭಾಗ 'ಸರಸ್ವತಿ ಸಂಹಾರ' ಇದ್ದೇ ಇವೆ. ಅವು ಸಮಯಕ್ಕೆ ಸರಿಯಾಗಿ ಒದಗಬೇಕು, ಅಷ್ಟೆ. ಸಕಾಲಕ್ಕೆ ಯೋಗ್ಯವಾದುದನ್ನು ಕೊಡುತ್ತೇವೆ ಎಂದಿಷ್ಟೆ ನಮ್ಮ ವಾಗ್ದಾನ. ಮಾತು ಕೊಡುವದು ನಮ್ಮದು, ಅದನ್ನು ಕೃತಿಗಿಳಿಸುವ ಶಕ್ತಿ ನಿಮ್ಮದು.

ಆದರೂ

ಬಳ್ಳಾರಿ
೧—೧೦—೫೧

ಆತ್ಮವಿಶ್ವಾಸಿ
**ಸಂಪಾದಕ**

# ನನ್ನ-ನಿಮ್ಮ ಮಾತು

ಈ ಪುಟ್ಟ ಸಂಗ್ರಹದಲ್ಲಿರುವ ಹೊಟ್ಟ ಏಕಾಂಕಗಳನ್ನು ಏನೆಂದು ಕರೆಯಬೇಕೊ ತಿಂಮನೇ ಬಲ್ಲ! ಇವಕ್ಕೆ 'ನಾಟಕಗಳು' ಎಂದು ನಾಮಕರಣ ಮಾಡಿದರೆ ಶುದ್ಧ ಅಪಮಾನ–ಈ ಇವಕ್ಕೇ. ಇವನ್ನು ಆಟಕಗಳು ಎಂದರೆ ಸದ್ಯಕ್ಕೆ ಸಾಕು. ಈ ಆಟಕಗಳಲ್ಲಿಯೂ ಮೂರು ಬಗೆಯವು ಬೆರೆತು ಒಂದಿವೆ. "ಕದಲಾರತಿ", "ಭಗವಂತನ ಭವಿಷ್ಯ", "ಒಂದೇ ವರ್ಷದಲ್ಲಿ"–ಇವು ಬಾನುಲಿ ರೂಪಕಗಳು; ಕೇವಲ ಕೇಳುವ ಆಟಕಗಳು. ಮುಂದೆ ಬಂದು ಎಡಗಡೆ ತಿರುಗಿ–ಬಲಗೈಚಾಚಿ- ಮುಖವನ್ನು ಹೊಟ್ಟುಮಾಡಿ–ಮೀಸೆಗೆ ಕೈ ಹಾಕಿ ಮುಂತಾದ ಮಾಮೂಲು ಮಾರ್ಗದರ್ಶಕ ಮಾತುಗಳಿಗೆ ಇಲ್ಲಿ ಎಡೆ ಇಲ್ಲ. ಇವನ್ನು ಇರುವಂತೆಯೆ ಆಡಿತೋರಿಸಿದರೆ ನೋಡುವವರಿಗೆ ನೋವು ಕೊಟ್ಟ ಸತ್ಕೀರ್ತಿ ಸಂಪೂರ್ಣವಾಗಿ ಲಭಿಸಬಹುದು. ಇನ್ನುಳಿದವುಗಳಲ್ಲಿ ಹಲವು ಓದುವ ಆಟಕಗಳು, ಕೆಲವು ಆಡುವ ಆಟಕಗಳು. "ತಿಂಮ ಸತ್ತಾಗ" ಎಂಬುದನ್ನು ಮಾತ್ರ ಓದುವದೇ ಮೇಲು—ಅದೂ ಸಹ ದಯವಿಟ್ಟು ಮನಸ್ಸಿನಲ್ಲಿಯೇ! ಗಟ್ಟಿಗಟ್ಟಿಯಾಗಿ, ಸ್ವರಬದ್ಧವಾಗಿ, ಶಾಸ್ತ್ರೋಕ್ತವಾಗಿ, ಸರಾಗವಾಗಿ, ಸಲಕ್ಷಣವಾಗಿ, ಭಾವಪೂರಿತವಾಗಿ ಅಳುತ್ತ ಓದಿದರೆ ಏನು ಗತಿ? ಸುತ್ತುಮುತ್ತಲವರು ಓಡಿಯೇ ಬಂದಾರು ಆಮೇಲೆ, ಏನಾಗಿತ್ತು ಎಂದು ಕೇಳಲು. ನನ್ನ "ರೇಡಿಯೊ ನಾಟಕಗಳ"ಲ್ಲಿಯ 'ನಾನೇ ಸತ್ತಾಗ' ಎಂಬುದನ್ನು ಓದಿದವರಿಗೆ, ಇದೇನು ಮತ್ತೆ ಅದೇ ಬಂದಿದೆ ಎನಿಸಬಹುದು ಇದನ್ನು ನೋಡಿದೊಡನೆಯೆ. ಓದಿದಮೇಲೆ ತಾನೇ ಹೊಳೆಯುತ್ತದೆ, ಮಾತಿನ ರೀತಿ ಒಂದೇ ಆಗಿದ್ದರೂ ನೀತಿಯಲ್ಲಿ ನಾವೀನ್ಯತೆ ಇದೆ ಎಂದು. ಮೊಟ್ಟಮೊದಲಿರುವ 'ಹನ್ನೊಂದನೆ ಅವತಾರ' ಮತ್ತು ಕಟ್ಟಕಡೆಗಿರುವ 'ಯದ್ವಾ–ತದ್ವಾ ಅರ್ಥಾತ್ ದೇವರ ಆತ್ಮಹತ್ಯೆ' ಇವೆರಡಂತೂ ನೋಡುವ ಆಟಕಗಳು. ಆದರೆ ಈ ಎರಡನೆ ಹುಚ್ಚು ಆಟಕದ ಬಗ್ಗೆ ಒಂದು ಹುಶಾರಿ ಹೇಳಲೇಬೇಕು. ಆಡುವವರಂತೆ ನೋಡುವವರಿಗೂ ಒಂದು ಎದೆಗಾರಿಕೆ ಬೇಕು. ನೋಡಿದವರು ಯದ್ವಾ-ತದ್ವಾ ಎಂದುಬಿಟ್ಟರೆ ಆಡಿದವರಿಗೆ ಆತ್ಮಹತ್ಯವೇ ಗತಿ! ಇದು ಸಾಕ್ಷಾತ್ ಸ್ವಾನುಭವದ ಮಾತು. ಸುಮಾರು ೧೧–೧೨

ವರ್ಷಗಳ ಹಿಂದೆ ಇದನ್ನು ಬರೆದುಮುಗಿಸಿದ ಹೊಸ ಹುರುಪಿನಲ್ಲಿ ಈ ಹುಚ್ಚು ಆಟಕವನ್ನು ಬಳ್ಳಾರಿಯಲ್ಲಿ ಪ್ರದರ್ಶಿಸಿದೆವು. ನಾನೇ ದೇವನ ವೇಷಹಾಕಿ ರಂಗಭೂಮಿಯ ಮೇಲೆ ಟೈಯಿಂದ ಉರುಲು ಹಾಕಿಕೊಂಡು ಆತ್ಮಹತ್ಯ ಮಾಡಿಕೊಂಡೆ. ಮರುದಿನ ನೋಡಬೇಕಿತ್ತು ನನ್ನ ಫಜೀತು. ಉತ್ತಮ ಜಾತಿಯವರೆಂದು ಭ್ರಮಿಸಿಕೊಂಡ ಅನೇಕರಂತೂ ನನ್ನ ಮೇಲೆ ತಮ್ಮ ಜುಟ್ಟಿನಿಂದಲೆ ಕೆಂಡಕಾರಿದರು. ನತ್ತು ಹೋಗಿದ್ದ ದೇವರ ದಯೆಯಿಂದ ಅವರ ತಪೋಜ್ವಾಲೆ ಎಂದೋ ತಣ್ಣಗಾಗಿದ್ದಿತು. ನಾನು ಉಳಿದುಕೊಂಡೆ. ಮುಕ್ತ ಕಂಠದಿಂದ ಬೈದು ನನ್ನನ್ನು ಹೊಲೆಯನೆಂದು ಕರೆದು ಗೌರವಿಸಿದರು. ಅತೋಭ್ರಷ್ಟ ತತೋಭ್ರಷ್ಟನಾಗಬೇಕಿದ್ದ ಆ ಸುಮುಹೂರ್ತದಲ್ಲಿ ನನ್ನ ಪಾಲಿಗೆ ದೇವರಾಗಿ ಬಂದರು, ದಿವಂಗತ ಶ್ರೀ ತಾಡಪತ್ರಿ ರಾಘವಾಚಾರ್ಯರು. ‘ ದೇವರ ಆತ್ಮಹತ್ಯ ’ ಕ್ಕೆ ಮೆಚ್ಚಿ, ನಮ್ಮ ಬೀಚಿಯೊಬ್ಬ ‘ ಜೀನಿಯಸ್ಸು ’ ಇದನ್ನು ‘ ಫಿಲಂ ’ ತೆಗೆಯಬೇಕು ಎಂದು ಮುಂತಾಗಿ ಅತಿಶಯೋಕ್ತಿಗಳಿಂದ ವರ್ಣಿಸಿದ ತಕ್ಷಣವೇ, ನನ್ನನ್ನು ಚಾಂಡಾಲನೆಂದು ಕೊಂಡಾಡಿದ ಅದೇ ಜುಟ್ಟುಧಾರಿಗಳ ದೃಷ್ಟಿಯಲ್ಲಿ ನಾನು ಏಕ್ದಂ ‘ ಜೀನಿಯಸ್ಸೇ ’ ಆಗಿಬಿಟ್ಟೆ. ಇಂದಿಗೂ ರಸ್ತೆಯಲ್ಲಿ ಕಂಡಾಗ ಅವರೇ ಮೊದಲು ನಮಸ್ಕಾರ ಎನ್ನುತ್ತಾರೆ ! ಶಂಖದಿಂದ ಬೀಳುವವರೆಗೂ ನೀರಿಗೆ ಬಹಳ ಕಷ್ಟ. ಅದಕ್ಕೇ ಅಂದದ್ದು ಎದೆಗಾರಿಕೆ ಬೇಕು ಎಂದು. ‘ ಶ್ರೀಮುಚ್ಚುನಾವಣೆಗೀತಾ ’, ‘ ವಣ ಮಹೋತ್ಸವ ’, ‘ ಕೆ. ಪಿ. ಸಿ. ಸಿ. ಮಾನಸಂರಕ್ಷಣಾ ’ ಇವು ಕೇವಲ ಅರಾಂ ಕುರ್ಚಿಯ ಆಟಕಗಳು.

ಇನ್ನು ಇವುಗಳ ಅಯೋಗ್ಯತೆ. ಏನಿದೆ ಈ ಆಟಕಗಳಲ್ಲಿ? ಕ್ಷಣಿಕವಾದ ಇವನ್ನು ಶಾಶ್ವತಮಟ್ಟಕ್ಕೆ ಏರಿಸುವದು ಯಾವ ಬ್ರಹ್ಮನಿಂದಲೂ ಸಾಧ್ಯವಿಲ್ಲ. ಕಾಳಿದಾಸನ ಶಕುಂತಲೆಯಂತೆ ಇವು ಕಡೆಯವರೆಗೆ ಉಳಿಯುವವೋ ಎಂಬ ದಡ್ಡ ಪ್ರಶ್ನೆಗೆ ಎಷ್ಟೂ ಅವಶ್ಯಕತೆ ಇಲ್ಲ. ತತ್ರಾಪಿ ರಾಜಕೀಯ ಹಿನ್ನೆಲೆ ಇರುವ ಆಟಕಗಳಿಗಂತೂ ಆಯುಷ್ಯವೇ ಅಲ್ಪ. ಅವು ಬಹುಕಾಲ ಬಾಳಿದರೆ ನಮ್ಮ ಪ್ರಗತಿ ಪೀಳಿಗೆಗಳಿಗೆ ಅಗೌರವ. ಹಳೆಯ ವಸ್ತುಸ್ಥಿತಿಯ ಸತ್ಯಚಿತ್ರವೆಂಬ ದೃಷ್ಟಿಯಿಂದ ಎಂದಾದರೂ ನೋಡಲು ಬರಬಹುದು, ಅಷ್ಟೆ. ಎಲ್ಲ ಕನ್ನಡ ಶಾಲಾ ಮಾಸ್ತರರಿಗೂ ಸರಿಯಾಗಿ ಸಂಬಳ ದೊರೆತ ಮರುದಿನವೇ ‘ ದೇವರ ಆತ್ಮಹತ್ಯ ’ ವನ್ನು ಕೈದು ಮಾಡಬಹುದು. ನೂರಾರು ವರ್ಷಗಳು ಬೆಳೆದು ಬಾಳಬೇಕಾದ ಮರಗಳೂ ಬೇಕು. ಅವಸರದಲ್ಲಿ ಬೆಳೆದು ಫಲ ಕೊಡುವ

ಗಿಡ ಮೂಲಿಕೆಗಳೂ ಬೇಕು. ವಿಶ್ವದ ವೈಶಾಲ್ಯವು ನೆನಪಿನಲ್ಲಿ ಉಳಿದರೆ ಎಲ್ಲರಿಗೂ ಒಳಿತು.

ಪರಶುರಾಮನು **ನೂರುಬಾರಿ** ಕ್ಷತ್ರಿಯ ಕುಲವನ್ನು **ನಿರ್ಮೂಲ ಮಾಡಿದ**ನೆಂಬುದು ಎಷ್ಟು ಸ್ವಾರಸ್ಯವಾಗಿದೆಯೋ ಮಾನವಕೋಟಿಯ **ಉದ್ಧಾರಕ್ಕಾಗಿ ಸರ್ವಶಕ್ತ**ನಾದದೇವನು **ದಶಾವತಾರ**ಗಳನ್ನು ಮಾಡಿದುದೂ ಅಷ್ಟೇ ಮೆಚ್ಚುವಂತಿದೆ. ಉದ್ಧಾರ ಮಾಡಿದ್ದೇ ಮಾಡಿದ್ದು, ಮಾಡಿದ್ದೇ ಮಾಡಿದ್ದು. ಆ ದೇವನ ಏಕಾದಶ ಅಪರಾಧವೆ ತಿಂಮಾವತಾರ. ಇದೀ (ಪಾಕಿಸ್ತಾನದ ಪ್ರಕರಣದಿಂದ ಕೊಂಚ ಮುಕ್ಕಾದ) ಭಾರತಕ್ಕೆ ಪ್ರ-ಪ್ರಥಮ ಮಹಾಚುನಾವಣೆ ಬಂದಿರುವ ಈ ಪರ್ವಕಾಲವಲ್ಲದೆ ಬೇರಾವಾಗ ಆಗಬೇಕು ತಿಂಮಾವತಾರ ? ಪ್ರಜಾಪ್ರಭುತ್ವದ ಧರ್ಮಗ್ಲಾನಿ ಈಗಲ್ಲದೆ ಇನ್ನೆಂದು ಇಷ್ಟು ಆಗಲು ಸಾಧ್ಯ ? ಗೆಳೆಯ ಸಿಂಹನು ಚಿತ್ರಿಸಿರುವ ' ಹನ್ನೊಂದನೆ ಅವತಾರ 'ವು ಹೇಗಿದೆ ? ಹನ್ನೊಂದನೆ ಅವತಾರಕ್ಕೆ ಸ್ವಾಗತ, ಸುಸ್ವಾಗತ. ಇಂತಿಷ್ಟು ಈ ಆಟಕಗಳ ಸ್ವರೂಪದರ್ಶನ—ಸ್ವಲ್ಪದರಲ್ಲಿಯೆ.

ಈ ಆಟಕಗಳಲ್ಲಿ ಕೆಲವು ಮಾತ್ರ ಈಗಾಗಲೆ ಅಲ್ಲಲ್ಲಿ ಪ್ರಕಟವಾಗಿದ್ದವು. ಅವನ್ನು ಈ ಸಂಗ್ರಹದಲ್ಲಿ ಸೇರಿಸಿಕೊಳ್ಳಲು ಅನುಮತಿ ಕೊಟ್ಟ ಆಯಾ ಸಂಪಾದಕರಿಗೆ ನಾನು ಋಣಿ. ಲಲಿತ ಮುದ್ರಣಾಲಯವು ಸುಲಲಿತವಾಗಿ ಸಕಾಲಕ್ಕೆ ತಿಂಮಾವತಾರಕ್ಕೆ ಅನುಕೂಲ ಮಾಡಿಕೊಟ್ಟು ಉಪಕರಿಸಿದೆ. ತಿಂಮ ಸಾಹಿತ್ಯಮಾಲೆಯ ಮಾಲಕರಿಗಂತೂ ನಾನು ಸದಾ ಆಭಾರಿ; ಅವರೂ ನನಗೆ ಹಾಗೆಯೇ. ಇನ್ನುಳಿದವರೆಂದರೆ ಈ ನನ್ನ ಅಸಾಧಾರಣ ಗ್ರಂಥಕ್ಕೆ ತಕ್ಕುದಾದ ಇಂತಹ ಅನುಪಮ ಮುನ್ನುಡಿಯನ್ನು ದಯಪಾಲಿಸಿರುವ ಮಹಾನುಭಾವರು ! ಎರಡು ವರ್ಷಗಳಿಂದಲೂ ಐದನೆಯ ತರಗತಿಯಲ್ಲಿಯೇ ಓದುತ್ತಿರುವ ಒಂಭತ್ತು ವರ್ಷಗಳ ಬಾಲಕನಾದ ಪ್ರ-ಪ್ರಥಮ ಪುತ್ರನೇ ಈ ಮುನ್ನುಡಿಯ ಒಹ್ಮ. ಆದಕಾರಣ ಅವನ ಸ್ವಹಸ್ತ ದಿವ್ಯ ಲಿಪಿಯಲ್ಲಿಯೇ ಈ ಮುನ್ನುಡಿಯನ್ನು ಅಚ್ಚುಪಡಿಯಿಂದ ಮುದ್ರಿಸಲಾಗಿದೆ. ' ಇದೇನು ಬೀಚಿಗೆ ಹುಚ್ಚು ಹಿಡಿದಿದೆಯೇ ? ' ಎಂದು ಯಾರಾದರೂ ಕೇಳಬಹುದು. ಇಲ್ಲ, ಹುಚ್ಚು ಬಿಟ್ಟಿದೆ, ಅನುಭವವೆಂಬ ಔಷಧಿಯಿಂದ. ಮುನ್ನುಡಿಕಾರರ ಹೆಸರನ್ನು ನೋಡಿ ' ದಾಸಕೂಟ 'ವನ್ನು ಕಸವೆಂದು ಎಸೆದೇ ಬಿಟ್ಟ ಪ್ರಾಮಾಣಿಕತೆಯ ಪ್ರೇಮಿಗಳು ಇದ್ದಾರೆ. ಅದನ್ನು ಚೆನ್ನಾಗಿದೆ ಎಂದವರೊಡನೆ ಮಾತು ಬಿಟ್ಟ

ಮಾತು ಬಲ್ಲ ಮಹಾನುಭಾವರೂ ಇದ್ದಾರೆ. ಮುನ್ನುಡಿಕಾರರ ಮೇಲೆ ತನು ಗಿದ್ದಿರಬಹುದಾದ ಅಸೂಯೆಯನ್ನು ಇನ್ನೊಬ್ಬರು ವಿಮರ್ಶೆಯಲ್ಲಿ ಸುರಿದು ಸೇಡು ತೀರಿಸಿಕೊಂಡರು, ಪಾಪ ! ಅವರನ್ನು ಕೆಣಕುವ ಔದಾರ್ಯವನ್ನು ಸಹ ತೋರಿದರು ಅದರಲ್ಲಿಯೇ. "ತಿಮ್ಮನ ತಲೆ"ಯ ಹಣೆಯ ಬರೆಹವೂ ಬೇರೆಯಾಗಲಿಲ್ಲ. ಮುನ್ನುಡಿ ಬರೆದವರನ್ನು 'ನೀವೂ ಮಾಸ್ತಿ ಶ್ರೀರಂಗರಂತೆ ಗುಂಪು ಕಟ್ಟಿಕೊಳ್ಳುತ್ತೀರಿ' ಎಂದು ಆರೋಪಿಸಿ, ಮಾಲೆಗೆ ಸಂಬಂಧವಿಲ್ಲದೆ ಮೂಲೆಯಲ್ಲಿದ್ದ ಮಾಸ್ತಿ ಶ್ರೀರಂಗರನ್ನೂ ಎಳೆದು ತಂದಂತಾಯಿತು. ಇವೆಲ್ಲ ಗೋಜೇ ಬೇಡ, ನನ್ನ ವಿನಂತಿಯನ್ನು ಮನ್ನಣೆ ಮಾಡಿ ಮುನ್ನುಡಿ ಬರೆದು ಕೊಟ್ಟು ಉಪಕರಿಸಿದವರಿಗೆ ಈ ಉಡುಗೊರೆ ಕೊಡಿಸುವದೇ ಬೇಡವೆಂದು ಈ ಬಾರಿ ಹೊಸ ಉಪಾಯವನ್ನು ಸೂಚಿಸಿದ್ದಾನೆ •ತಿಂಮಜ್ಜ. ಒಂಬತ್ತು ವರ್ಷದ ನನ್ನ ಮಗನಿಗಂತೂ ಯಾರೂ ಶತ್ರುಗಳಿರಲಿಕ್ಕಿಲ್ಲ; ಯಾರ ಅಸೂಯೆ ಯನ್ನೂ ಗಳಿಸುವಷ್ಟು ಸುಪ್ರಸಿದ್ಧನೂ ಇಲ್ಲ. ನನ್ನ ಈ ಏಕೋಂಕುಗಳಿಗೆ ಸಲ್ಲ ಬೇಕಾದ ಹೂ ಮುಳ್ಳುಗಳು ಅವುಗಳ ಬೆಲೆಯ ಮೇರೆಗೆ ಅವುಗಳ ತಲೆಯ ಮೇಲೆಯೇ ಬೀಳಲಿಯೆಂದು ಬಯಸಿ ಎಳೆಬಾಲಕನ ಮುನ್ನುಡಿಯೊಂದಿಗೆ ಈ ಗ್ರಂಥವನ್ನು ಎಲ್ಲರ ಮುಂದಿಕ್ಕಿದ್ದೇನೆ.

ಕಡೆಯ ಮಾತು. ಇವು ನಗದವರನ್ನು ನಗಿಸುವ ಕತೆಗಳಲ್ಲ, ನಗಲು ಬಲ್ಲವರನ್ನು ಮಾತ್ರ ನಗಿಸುವ ಕತೆಗಳು. ಆದರೆ, ನಗಲೂ ಕೂಡ—ನಗಿಸಲೂ ಬೇಕಾಗುವಂತೆ—ಹೃದಯದ ನಿರ್ಮಲತೆ ಬೇಕು; ಮಕ್ಕಳ ಮನಸ್ಸೂ ರಸಿಕತೆಯ ತಪಸ್ಸೂ ಬೇಕು. ಅಲ್ಲಿ ಒಂದೇ ಇವುಗಳ ವರ್ಚಸ್ಸು. ಪರಿಮಳ ವನ್ನು ಆಘ್ರಾಣಿಸಲು ಮೂಗು ಬೇಕಲ್ಲವೇ ? ಯಾವ ಮುಖದಲ್ಲಿ ಎಷ್ಟು ಸೌಂದರ್ಯವಿದ್ದರೇನು ಸ್ವಾಮಿ? ಅದನ್ನು ಗುರುತಿಸುವ ಯೋಗ್ಯತೆ ನೋಡುವ ಕಂಣಲ್ಲಿಯೇ ಇಲ್ಲದಿದ್ದರೆ. ನಗುಬಂದಷ್ಟು•ನಕ್ಕು, ವಿಡಂಬನಕ್ಕೆ ವಿಷಯವಾದ ಅವಿಚಾರವನ್ನಿಷ್ಟು ಸಹೃದಯೀ ಸುವಿಚಾರಿಗಳು ಗಮನಿಸಿದರೆ ಸಾಕೇ ಸಾಕು, ನನಗೆ ತಿಂಮನ ಭಲೆ ದೊರೆತಂತೆಯೆ. ಇದಕ್ಕೂ ಹೆಚ್ಚು ಇನ್ನೇನಿದೆ ಬೇಡಲಿಕ್ಕೆ ?

ಬಳ್ಳಾರಿ
೧–೧೦–೫೧

ತಮ್ಮಂತೆಯೆ ತಿಂಮ

Bichi

# ಹೊಟ್ಟೆಯಲ್ಲಿ

# ಹನ್ನೊಂದನೆ ಅವತಾರ

## ಅಪಾತ್ರ ಪಾತ್ರಂಗಳು

೧. **ಕಾಂಜೀವರಂ ಕಸ್ತೂರಿರಂಗನ್** — ಮುಖ್ಯೋಪಾಧ್ಯಾಯ, ಕಾನಕಾನಹಳ್ಳಿ ಎರಡನೇ ನೆಂಬರ ಕನ್ನಡೇ ಡಿಡಿ ಗಂಡುಮಕ್ಕಳ ಪ್ರಾಥಮಿಕ ಶಾಲೆ.

೨. **ವೀರಯ್ಯ ಚಿತ್ತದ್** — ಕಾ. ಕ. ಎ. ನೆಂ. ಕ. ಡೆ. ಗಂ. ಮ. ಪ್ರಾ. ಶಾಲೆಯ ಎರಡನೆ (ಮತ್ತೂ/ಅಥವಾ ಕಡೆಯ) ಶಿಕ್ಷಕ.

೩. **ತಿಂಮ**—ನಲವತ್ತೇಳನೆ ಮಾಡೆಲ್ ದೇಶಭಕ್ತ; ಎಮ್ಮೆಲೆ.

೪. **ಧರ್ಮಸೇವಾ ಧುರೀಣ ಸುಬ್ಬ ಶ್ರೇಷ್ಠಿಯವರು** — ಕಳ್ಳಪೇಟೆ ಹಿರಿಯುದ್ಧರಿ; ಕೊಡುಗೈ.

೫. **ಮೋಹನರಾವ್** ಬಿ. ಎ. (ಆನರ್ಸ್, ಆರ್ಟ್ ಹವಾರ್ಡ) — ಊರ ಕುಲಕರ್ಣಿಯ ಮಕ್ಕಳು; ವಿಮಾ ಕಂಪೆನಿ ಇನ್ಸ್ಪೆಕ್ಟರು; ಸಿಮೆಂಟಕಂಪೆನಿ ಸೋಲ್ ಏಜಂಟರು; ಇತ್ಯಾದಿ ಇತ್ಯಾದಿ.

೬. **ಪೊಂಪಾಪತಿಭಟ್ಟ**—ತಸೀಲ ಕಚೇರಿಯು ಒಂದೂಟ ಕೊಟ್ಟು ಸಾಕಿರುವ ಸಾಧುಪ್ರಾಣಿ.

೭. **ಕಾಮ್ರೇಡ ಅಪ್ರಮೇಯ**—ಇಂಟರ ನಪಾಸಾದ ವಿದ್ಯಾರ್ಥಿ; ಆದ ಕಾರಣ ವೃತ್ತಿ—ಕಮ್ಯೂನಿಸ್ಟ್.

೮. **ಕೆಂಚ**—ಬಾಯಿತೆಗೆದು ನಿಂತು ಭಾಷಣ ಕೇಳಿ ಸಂತೆ ಕಳೆದುಕೊಂಡ ಹುಚ್ಚುಮಂಗ.

ರಾಮಾಚಾರಿ, ಹಣಮ್ಯಾ, ಚನಬಸ್ಯ, ಕುಮಾರಿ ಸಾಂತರುದ್ರವ್ವ ಮತ್ತಿತರ ವಿದ್ಯಾರ್ಥಿಗಳು.

(ಶಾಲೆಯ ವಾರ್ಷಿಕೋತ್ಸವದ ಮಹಾಸಭೆ ನೆರೆದಿದೆ. ಗಾಂಧೀಟೊಪ್ಪಿಗೆ, ಜವಾಹರ ಜುಬ್ಬ, ಜಯಪ್ರಕಾಶ ಜಾಕೀಟು, ಪಟೇಲಪಂಚೆ ಧರಿಸಿದ ತಿಂಮ ಅಧ್ಯಕ್ಷಸ್ಥಾನದಲ್ಲಿ ರಾರಾಜಿಸುತ್ತಿದ್ದಾನೆ. ಆಗಾಗ್ಗೆ ಎರಡು ಕೈಗಳಿಂದ ತಲೆಯ ಮೇಲಿನ ಬಿಳಿಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗುತ್ತಿದ್ದಾನೆ. ಶುಭ್ರವಾದ ಬಿಳೀ ಉಡುಪು, ಥಳಥಳಿಸುವ ಕಳ್ಳಚಿನ್ನದ ಕನ್ನಡಕ, ತ್ರಿನಾಮಗಳಿಂದ ಅಲಂಕೃತರಾದ ಕಸ್ತೂರಿರಂಗನರು ಸೆರಗಿನಂತೆ ಜಾರುತ್ತಿದ್ದ ಜರೀ ಮೇಲ್ಹೊದಿಕೆಯನ್ನು ಸರಿಪಡಿಸಿಗೊಳ್ಳುತ್ತ, ಕಾಗದದ ಹೂಮಾಲೆಯನ್ನು ಕೈಲಿ ಹಿಡಿದು ಅತ್ತಿಂದಿತ್ತ ಇತ್ತಿಂದತ್ತ ಗಡಿಬಿಡಿಯಲ್ಲಿ ಓಡಾಡುತ್ತಿದ್ದಾರೆ ಜೇಲಿನ ಹೆಡ್‌ವಾರ್ಡರನಂತೆ ಸೆಟೆದು ನಿಂತು ಕೈಯಲ್ಲಿ ಬೆತ್ತ ಹಿಡಿದ ವೀರಯ್ಯ ಬೆತ್ತದ್ ವಿದ್ಯಾರ್ಥಿಗಳು ಓಡಿ ಹೋಗದಂತೆ ಕಾಯಲು 'ಸೆಂಟ್ರಿ' ಕೆಲಸ ನಡೆಸಿದ್ದಾರೆ. ಮಕ್ಕಳು ಬಿಸಿಲಲ್ಲಿ ಬಣಗುತ್ತಿವೆ. ಪ್ರತ್ಯೇಕ ಸ್ಥಳದಲ್ಲಿ ಕಸ್ತೂರಿ ರಂಗನರ ಬಿಳೀ ಸೀರೆಯ ತಾಯಿ ಮತ್ತಿತರ ಸ್ತ್ರೀಯರು ಬೆಂಚಿನ ಮೇಲೆ ಕುಳಿತಿದ್ದಾರೆ. ಕಾರ್ಯಕ್ರಮ ಪ್ರಾರಂಭ.)

## ಕಾಂಜೀವರಂ ಕಸ್ತೂರಿರಂಗನ್

ಸಭಿಕರೇ, ರಾಜಾ ಪ್ರತ್ಯಕ್ಷ ದೇವತಾ ಎಂಬಂತೆ (ಮಕ್ಕಳ ಕಡೆ ತಿರುಗಿ) ತ್ರಿಳಿತ್ರಿಳ್ಳೋ (ಎಲ್ಲರೂ ಒಟ್ಟೊಬ್ಬರೆ 'ತಿಳೀತ್ರಿ-ತಿಳೀತ್ರಿ' ಎಂದು ಕೂಗುವರು.) ಇಂದಿನ ಸಮಾರಂಭಕ್ಕೆ ಅಧ್ಯಕ್ಷ ಪದವಿಯನ್ನು ವಹಿಸಿ ನಮ್ಮ ಕಾರ್ಯಕ್ರಮವನ್ನು ಯಶಸ್ವಿ ಮಾಡಿಕೊಡಲು ಬರಬೇಕಿದ್ದ ನಮ್ಮ ಬೋರ್ಡು ಅಧ್ಯಕ್ಷರ ದತ್ತು ತಾಯಿಯವರ ಆಕಸ್ಮಿಕ ಮರಣದ ಕಾರಣ ಅವರು ಬಾರದಿರುವದೂ, ನಮ್ಮೂರ ಮತ್ತು ನಿಮ್ಮೆಲ್ಲರಿಗೂ ಚಿರಪರಿಚಿತರಾದ ಧರ್ಮಸೇವಾಧುರೀಣ ಸುಬ್ಬಶ್ರೇಷ್ಠಿಯವರ ಮನೆಯಲ್ಲಿ ಕನ್ನ ಚೋರಿಯಾದುದೂ ನಮ್ಮೂರ ಫೌಜುದಾರರಾದ ಮಿಸ್ಟರ ಕಟುಕರಂಗಡಿ ಸಾಹೇಬರು ಈ ಕೇಸಿನಲ್ಲಿ ಲಂಚ ತಿಂದುದೂ, ಅದರ ವಿಚಾರಣೆಗಾಗಿ ದೇ. ಭರಾದ ಶ್ರೀ ತಿಂಮರು ಅನಾಯಾಸವಾಗಿ ಮತ್ತು ಸುನಾಯಾಸವಾಗಿ ನಮ್ಮ ಗ್ರಾಮಕ್ಕೆ ಬಂದು ನಮ್ಮೆಲ್ಲರಿಗೂ ಆನಂದವನ್ನುಂಟು ಮಾಡಿರುವದು ನನ್ನ ಮತ್ತು ನಿಮ್ಮೆಲ್ಲರ ಪುಣ್ಯ ಭಾಗ್ಯ, ಮತ್ತು ರಾಮಾನುಜನ ಆಶೀರ್ವಾದವೆಂದು ನಾನು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದು ನಾನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ. (ಮುಂದೆ ಕುಳಿತ ಮಕ್ಕಳ ಕಡೆ ನೋಡಿ) ಎಲ್ಲರೂ ಕೈ ತಟ್ಟಿರಿ.

( ಎಲ್ಲರೂ ಚಪ್ಪಾಳೆ ಇಕ್ಕುವರು. ರಾಮಾಚಾರಿ ಮಾತ್ರ ಸುಮ್ಮನಿರುವುದನ್ನು ಕಂಡು ವೀರಯ್ಯನವರು ಬೆತ್ತದಿಂದ ಬೀಸಿ ಬೆನ್ನಿಗೆ ಬಿಡುವರು. )

**ವೀರಯ್ಯ ಬೆತ್ತದ್**

ಕಿವಿ ಕೇಳೋದಿಲ್ಲೇನಲೆ ರಾಮಾಚಾರಿ ? ಕೈ ಯಾಕೆ ತಟ್ಲಿಲ್ಲ ?

**ರಾಮಾಚಾರಿ**

(ಎಡಗೈಯಿಂದ ಬೆನ್ನು ತುರಿಸಿಗೊಳ್ಳುತ್ತ ಬಲಗೈಯನ್ನು ಮೇಲೆತ್ತಿ) ಉಂಬೋ ಕೈಗೆ ಖಜ್ಜಿ ಆಗ್ಯಾವ್ರೀ ಮಾಸ್ತರೀ. ನನಗೆ ನಮ್ಮವ್ವ ಉಣಸ್ತಾಳ್ರೀ.

**ವೀರಯ್ಯ ಬೆತ್ತದ್**

( ಇನ್ನೊಂದು ಏಟನ್ನು ಕರುಣಿಸಿ ) ಯಾವಾಗ್ಲೂ ಉಂಡೋ ಯೋಚ ನೀನೆ ಈ ಆಚಾರೀಗೆ.

**ಮಕ್ಕಳ ಗುಂಪಿನಿಂದ ಒಂದು ದನಿ**

ಅವನ ತಮ್ಮ ಹಣಿವ್ಯಾಗೆ ಹುರುಕು ಹತ್ಯಾವ್ರೀ ಮಾಸ್ತ್ರೀ.

**ಹಣಮ್ಯಾ**

( ಕೋಪದಿಂದ ) ನನಗೆಲ್ಲಿ ಹತ್ಯಾವಲೆ ಚೆನಬಸ್ಯಾ ? ಅವರವ್ವಗೇ ಕಂಣು ಬಂದಾವ್ರೀ ಮಾಸ್ತ್ರೀ.

**ಕಾಂಜೀವರಂ ಕಸ್ತೂರಿರಂಗನ್**

( ಭಾಷಣವನ್ನು ಮುಂದುವರಿಸಿ ) ನಮ್ಮೆಲ್ಲರ ಅತಿಥಿಗಳಾದ ಮಾನ್ಯ ದೇಭ ಶ್ರೀ ತಿಂಮರು ಸಾಮಾನ್ಯರಲ್ಲ. ಇವರ ದೇಶತ್ಯಾಗ ಮತ್ತು ಸ್ವಾರ್ಥ ಪ್ರೇಮ ಜಗತ್ಪ್ರಸಿದ್ಧಿಯಾಗಿವೆ. ಇವರು ಒಂದು ಬಾರಿ ವಿಮಾನದಲ್ಲಿ ಸಹ ಹಾರಿಬಿಟ್ಟಿದ್ದಾರೆ. ಇವರು ರೈಲಿನಲ್ಲಿ ಪ್ರವಾಸ ಮಾಡುವಾಗ ಇವರನ್ನು ತಿಕೀಟು ಕೇಳುವ ಧೈರ್ಯವು ಯಾವ ಟ್ರಾವೆಲಿಂಗ್ ಟಿಕೆಟ್ ಕಲೆಕ್ಟರಗಾದರೂ ಇದೆಯೇ ? ಈ ವರ್ಚಸ್ವೀ ದೇಭರನ್ನು ತಿಕೀಟು ಕೇಳಿ ಅವಮಾನಗೊಳಿಸಿದ ಮೂರ್ಖತನಕ್ಕಾಗಿ ಒಬ್ಬ ರೈಲ್ವೆ ನೌಕರನಿಗೆ ಇಪ್ಪತ್ನಾಲ್ಕು ತಾಸುಗಳಲ್ಲಿಯೇ ನೀರಿಲ್ಲದ ಊರಿಗೆ ವರ್ಗವಾಯಿತು. ( ಮಕ್ಕಳ ಕಡೆ ತಿರುಗಿ ) ಎಲ್ಲರೂ ' ಷೇಮ್ ' ಎಂದು ಕೂಗಿರಿ.

(ಎಲ್ಲರೂ ' ಸೇಮ್ ' ' ಸೇಮ್ ' ಎಂದು ಕೂಗುವರು)

**ರಾಮನಾಚಾರಿ**

ಚನಬಸ್ಯ ನದರವಲ್ಲರ್ರಿ ಮಾಸ್ತೇ.

**ವೀರಯ್ಯ ಬೆತ್ತದ್**

( ಚನಬಸ್ಯನ ಗಾಂಧೀಟೊಪ್ಪಿಗೆಯ ಮೇಲೆ ಏಟು ಕೊಟ್ಟು ಧೂಳು ಎಬ್ಬಿಸಿ ) ಬಾಯಾಗೇನು ಕಡುಬು ಐತೇನಲೆ ಚನಬಸ್ಯಾ ?

**ಚನಬಸ್ಯ**

( ತಲೆ ತುರಿಸುತ್ತ, ತುಂಬಿದ ಬಾಯಿಯಿಂದ ) ಮಂಡಕ್ಕಿ ಅದಾವ್ರಿ ಮಾಸ್ತೇ ಬಾಯಾಗೆ. ನಮ್ಮ ಚಿಗಪ್ಪ..................ಜಾತ್ರ್ಯಾಗೆ ತಂದಿದ್ದ.

**ವೀರಯ್ಯ ಬೆತ್ತದ್**

ಮುಚ್ಚಲೆ ಬಾಯಿ. ಬಾಯಿ ತಗದರೆ ಬಿದ್ದೇನಿ ನೋಡು ನಿನ್ನ ಘಾಂದಿ ಟೊಪ್ಪಿಗಿ ಹರಿಯೋಹಂಗೆ.

**ಕಾಂಜೀವರಂ ಕಸ್ತೂರಿರಂಗನ್**

(ಮುಂದುವರಿಸುತ್ತ) ಮಾನ್ಯರಾದ ದೇ। ಭ। ತಿಂಮರೇನು ಹುಟ್ಟುತ್ತಲೆ ಶ್ರೀಮಂತರಲ್ಲ. ಒಂದು ಕಾಲದಲ್ಲಿ ಇವರು ಅನ್ನಕ್ಕೂ ಅಂಡಲಿದಿದ್ದಾರೆ.ಆದರೆ ಕೊಡುವ ದೇವರು ಬಡವನೇ ? ಈ ಎರಡೇ ವರ್ಷಗಳಲ್ಲಿ ಕುಬೇರನಿಗೂ ಸಾಲ ಕೊಡುವಂತಾಗಿದ್ದಾರೆ. ತಮ್ಮ ಕುಟುಂಬದವರಿಗಂತೂ ಇವರು ಸಾಕ್ಷಾತ್ ಕಾಮಧೇನು ಇದ್ದಂತೆ....

**ಕಾಮ್ರೇಡ್ ಅಪ್ರಮೇಯ**

(ಖಿಕ್ಕೆಂದು ನಕ್ಕು) ಕಾಮಧೇನು ಎಂಬುದೊಂದು ಮೃಗ.

**ಕಾಂಜೀವರಂ ಕಸ್ತೂರಿರಂಗನ್**

(ಯಾರನ್ನೂ ಲೆಕ್ಕಿಸದೆ) ಬಡವರೆಂದರೆ ಇವರಿಗೆ ತೀರಿತು. ಪ್ರತಿಯೊಂದರಲ್ಲೂ ಇವರು ಬಡವರ ಹೆಸರನ್ನೇ ಮುಂದೆ ಮಾಡುವ ಉಪಕಾರವನ್ನು ಸದಾ ಮಾಡುತ್ತಾರೆ. ಅನೇಕ ಬಡಜನಗಳ ಹೆಸರಿನಲ್ಲಿ ಅಗ್ಗದರದ ಕಾಳಿನ ಅಂಗಡಿಯನ್ನು, ಸೀಮೆಎಂಣೆ ಸಿಮೆಂಟಿನ ಪರ್ಮಿಟ್ಟುಗಳನ್ನೂ, ಬಟ್ಟೆ ಅಂಗಡಿ ಲೈಸನ್ಸನ್ನೂ, ಮೋಟಾರ ಲಾರಿಗಳನ್ನೂ ಇವರು ಪಡೆದಿರುವದೇ ಸಾಕು, ಬಡವರ ಮೇಲೆ ಇವರಿಗಿರುವ ಪ್ರೇಮವನ್ನೂ ಇವರ ನಿಸ್ವಾರ್ಥ ಸೇವೆಯನ್ನೂ

ವ್ಯಕ್ತಮಾಡುತ್ತದೆ. ಭೂಮಿತಾಯಿಯೆಂದರೆ ಇವರಿಗೆ ಬಹಳ ಗೌರವ. ನೂರಾರು ಎಕರೆಗಳ ಉತ್ತಮ ಭೂಮಿಯನ್ನು ಕೊಂಡಿದ್ದರೂ, ಸೊಕ್ಕು ಸೆಡವು ತೋರದೆ ಸರಕಾರವು ದಯಪಾಲಿಸಿರುವ ಹದಿನೈದು ಎಕರೆ ವಣ ಭೂಮಿಯನ್ನು ಸಹ ಸ್ವೀಕರಿಸಿದ್ದಾರೆ. ಇವರಲ್ಲಿಯ ದೇಶಭಕ್ತಿಗೆ ಬೇರಿನ್ನಾವ ನಿದರ್ಶನ ಬೇಕು ? ಶ್ರೀ ದೇ। ಭ। ತಿಂಮರು ನಮ್ಮೆಲ್ಲರ ಬೇಡಿಕೆಯನ್ನು ಮಾನ್ಯಮಾಡಿ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಬೇಕೆಂದು ನಿಮ್ಮೆಲ್ಲರ ಪರವಾಗಿ ನಾನು ಕೇಳಿ ಕೊಳ್ಳುತ್ತೇನೆ. (ಕೈಲಿದ್ದ ಕಾಗದದ ಹೂಮಾಲೆಯನ್ನು ದೇ। ಭರ ಕೊರಳಲ್ಲಿ ಹಾಕುವರು) ಎಲ್ಲರೂ ಕೈ ತಟ್ಟಿರಿ.

(ಎಲ್ಲರೂ ಕೈತಟ್ಟುವರು. ದೇ। ಭರೂ ಕೈತಟ್ಟುವರು)

## ದೇ। ಭ। ತಿಂಮ

(ಅಧ್ಯಕ್ಷ ಸ್ಥಾನದಲ್ಲಿಯೇ ಎದ್ದು ನಿಂತು ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ, ಎರಡೆರಡು ಬಾರಿ ಘ್ಯಾ ಘ್ಯಾ ಮಾಡಿ, ಗಂಭೀರಮುಖ ಮುದ್ರೆಯಿಂದ)

ನಾನು ಜೇಲಿನಲ್ಲಿದ್ದಾಗ....ಅದಿರಲಿ....ನಾನು ಜೇಲಿನಲ್ಲಿದ್ದಾಗ........ (ಕಸ್ತೂರಿರಂಗನರ ಮುಖ ನೋಡಿ) ಜೇಲಿನಲ್ಲಿ ನಾನಿದ್ದಾಗ

## ಕಾಂಜೀವರಂ ಕಸ್ತೂರಿರಂಗನ್

(ವಿದ್ಯಾರ್ಥಿಗಳನ್ನು ಕುರಿತು) ಎಲ್ಲರೂ ಕೈತಟ್ಟಿರಿ.

(ಕೈ ತಟ್ಟುವರು)

## ದೇ। ಭ। ತಿಂಮ

ನಾನು ಜೇಲಿನಲ್ಲಿದ್ದಾಗ....ಅದಿರಲಿ....ನಿಮ್ಮ ಹೆಡ್ಮಾಸ್ತರರು ಹೇಳಿದ್ದನ್ನೆಲ್ಲ ಕೇಳಿದಿರಿ.ಅದೆಲ್ಲವೂ ಚಾಚೂ ತಪ್ಪದೆ ನಿಜವಿದೆ. (ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ) ನಾನು ಜೇಲಿನಲ್ಲಿದ್ದಾಗ....ಅದಿರಲಿ. ಈಗ ನಾನೇನು ಮಾಡಬೇಕು ?.... ( ಮುಂದಿದ್ದ ಕಾರ್ಯಕ್ರಮವನ್ನು ನೋಡಿ ) ಪ್ರಾರ್ಥನೆ— ಕುಮಾರಿ ಶಾಂತರುದ್ರವ್ವಾ.

## ವೀರಯ್ಯಾ ಚಿತ್ತಾದ್

(ಹೊಸ ಪಟ್ಟೆಯನ್ನುಟ್ಟು ವಿದ್ಯಾರ್ಥಿಗಳ ಗುಂಪಿನಲ್ಲಿ ಕುಳಿತಿದ್ದ ಶಾಂತರುದ್ರವ್ವನ ಜಡೆಗೆ ಒಂದೇಟು ಜಡಿದು) ಏ, ಕತ್ತೆ! (ಆತ್ಮ) ಬರೀ ಇವನ್ನ ಕಾಯೋದೇ

ಆತಲ್ಲ ನನ್ನ ಹಣೇಬಾರ. (ಪ್ರಕಾಶ) ಘುಂ, ಹೋಗು. ಅಷ್ಟದವ್ಯಾಗೆ ನಿಂತು ಆ ಪದ ಹಾಡಿ ಬಾ ಹೋಗು. (ಬದಿಯಲ್ಲಿದ್ದ ಕಾಲುಪಿಯೊಸದ ಮೇಲೆ ಕೂಡು ವರು.)

### ಕು। ಸಾಂತರುದ್ರವ್ವ

(ಅರ್ಧಾಕ್ಷರ ಪಕ್ಕದಲ್ಲಿ ನಿಂತು ಅಂಜಅಂಜುತ್ತ ವೀರಯ್ಯನ ಮುಖವನ್ನು ನೋಡಿ ಹಾಡುವಳು. 'ಸುನೋ ಸುನೋ' ಎಂಬಂತೆ)

ನಿಂತಲ್ಲಿ ನಿಲ್ಲದಿಹದೆನ್ನ ಮನವೂ
ಕುಂತಲ್ಲಿ ಕಳ್ಳದಿಹದೆನ್ನ ಮನವೂ

### ವೀರಯ್ಯ ಬಿತ್ತಾದ್

(ಕೋಪದಿಂದ ಹಲ್ಲು ಕಡಿಯುತ್ತ) ಏ, ಮಂಗ್ಯಾ ! ಅತ್ತಾಗೆ ನೋಡು ಕುರ್ಚಿ ಕುರ್ಚೀ

### ಕು। ಸಾಂತರುದ್ರವ್ವ

(ದಿಗಿಲುಬಿದ್ದು ಕಂಪಿತಳಾಗಿ)

ಕುರ್ಚೀಯ ಮೇಲಣ ಮರ್ಕಟನಂತೆ
ಕುರ್ಚೀಯ ಮೇಲಣ ಮರ್ಕಟನಂತೆ....

### ದೇ। ಭ। ತಿಂಮ

(ಅಹಿಂಸಾ ತತ್ವವನ್ನು ತಕ್ಷಣವೇ ಮರೆತು ಕಣ್ಣು ಕೆಂಪುಮಾಡಿ ಘರ್ಜಿಸು ವರು) ಏ, ಸಾಕು ಬಾಯಿ ಮುಚ್ಚು.

### ವೀರಯ್ಯ ಬಿತ್ತಾದ್

ಕೋತಿ, ಹಳೆಕೋತಿ. ಕೊಂಬಿ ಅನ್ನಾಕೆ ಕುರ್ಚಿ ಅನ್ತೀಯಾ. ಬಾ ಇತ್ತಾಗೆ. (ಕುಮಾರಿ ಸಾಂತರುದ್ರವ್ವನನ್ನು ಕಿವಿಯಿಂದ ಹಿಡಿದು ದರದರ ಎಳೆದು ತಂದು ಮಕ್ಕಳ ಗುಂಪಿನಲ್ಲಿ ಚೆಲ್ಲುವನು. ತಡೆಯಲಾರದೆ ಎಲ್ಲರೂ ಬಿದ್ದುಬಿದ್ದು ನಗುವರು. ಬಿಡಲಾರದೆ ವೀರಯ್ಯನವರು ಎದ್ದು ಎದ್ದು ಹೊಡೆದು ಸಮಾಧಾನ ಮಾಡುವರು)

### ದೇ। ಭ। ತಿಂಮ

(ಎದ್ದು ನಿಂತು, ಗಾಂಧೀ ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ) ನಾನು ಜೇಲಿನಲ್ಲಿದ್ದಾಗ........ತಿಳಿಯಿತೋ ಇಲ್ಲೋ........

## ವೀರಯ್ಯ ಚಿತ್ರದ್

(ವಿದ್ಯಾರ್ಥಿಗಳನ್ನು ಉದ್ದೇಶಿಸಿ) ತ್ರೀಚೀತು ಅನ್ರೈಲೆ ಎಲ್ಲಾರೂ (ಎಲ್ಲರೂ ಒಬ್ಬೊಬ್ಬರೇ 'ತ್ರೀಚೀತ್ರೀ ತ್ರೀಚೀತ್ರಿ' ಎಂದು ಎರಡೆರಡು ಬಾರಿ ಕೂಗುವರು)

## ದೇ। ಭ। ತಿಂಮ

(ಗಾಂಧೀಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ) ನಾನು ಜೇಲಿನಲ್ಲಿದ್ದಾಗ....ಅದಿರಲಿ....ನನ್ನ ಇನ್ನೊಂದು ಕಡೆಯ ಭಾಷಣವಿದೆ. ಉಳಿದುದೆಲ್ಲವನ್ನೂ ಆಗ ಹೇಳುತ್ತೇನೆ. ಈಗ ಹೇಳಬೇಕಾದುದೆಲ್ಲವನ್ನೂ ಆಗಲೇ ನಿಮ್ಮ ಹೆಡ್ಮಾಸ್ತರರೇ ಹೇಳಿದ್ದಾರೆ.ಮುಂದಿನ ಕಾರ್ಯಕ್ರಮಕ್ಕೆ ಹೋಗೋಣ. ಹಳೆಯ ವಿದ್ಯಾರ್ಥಿಗಳಿಂದ ಹಿತೋಕ್ತಿ. ಧರ್ಮಸೇವಾ ಧುರೀಣ ಸುಬ್ಬಶ್ರೇಷ್ಠಿಯವರು ಮಾತನಾಡುವರು.

## ಧ। ಧು। ಸುಬ್ಬಶ್ರೇಷ್ಠಿ

ಶ್ರೀಮನ್ ಮಹಾಸ್ವಾಮಿಗಳ ಕೈಂಕರ್ಯದಲ್ಲಿ ಧುರೀಣನಾದ ನನಗೆ ಮಾನ್ಯ ಅಧ್ಯಕ್ಷರು ಮಾತನಾಡಲು ಅಪ್ಪಣೆ ಕೊಡಿಸಿದ್ದಾರೆ. ಮಹಾತ್ಮಾಗಾಂಧಿಯವರು ನಮ್ಮ ಮನೆಯವರಿದ್ದಂತೆ. ಏಕೆಂದರೆ ಮಹಾತ್ಮರೂ ನಮ್ಮ ಜಾತಿಯವರೇ ಎಂದು ಕೇಳಿದ್ದೇನೆ. ಅದೇ ನನಗೆ ಹೆಮ್ಮೆ. ವಿದ್ಯಾರ್ಥಿಗಳೇ, ನೀವೆಲ್ಲರೂ ವ್ಯಾಪಾರಿಗಳಾಗಬೇಕು. ನೋಡಿ, ಬ್ರಿಟಿಶರು ಇಲ್ಲಿಗೆ ವ್ಯಾಪಾರಕ್ಕಾಗಿ ಅಲ್ಲವೆ ಬಂದರು? ಮೂರು ಶತಮಾನಗಳು ನಮ್ಮನ್ನಾಳಿದರು. ಆದಕಾರಣ ನೀವೆಲ್ಲರೂ ವ್ಯಾಪಾರಿಗಳಾಗಿರಿ, ಹಣಗಳಿಸಿರಿ. ಅಣ್ಣ, ತಮ್ಮ, ತಂದೆ, ತಾಯಿ, ಬಂಧು, ಬಳಗ ಎಂಬುದೆಲ್ಲವೂ ಕೇವಲ ಪ್ರಾಪಂಚಿಕ ಮೋಹವೆಂಬ ವೈರಾಗ್ಯದ ಮಾತನ್ನು ಅನೇಕ ಮಹನೀಯರು ಹೇಳುತ್ತಲೆ ಬಂದಿದ್ದಾರೆ. ಇವರನ್ನೆಲ್ಲಾ ಅಂಟಿಸಿಗೊಂಡು ನೀವು ಹಾಳಾಗುವುದು ಬೇಡ. ಮುಖ್ಯವಾಗಿ ನೀವೆಲ್ಲರೂ ಹಣವನ್ನು ಗಳಿಸಬೇಕು.ಸಾಧು ಕಬೀರರು ಏನೆಂದು ಹಾಡಿದ್ದಾರೆ? 'ಹಣವೇ ನಿನ್ನಯ ಗುಣವೆಷ್ಟು ವರ್ಣಿಸಲಿ' ಎಂದಿದ್ದಾರೆ. ಆದಕಾರಣ ಹೇಗಾದರೂ ಮಾಡಿ ಏನಾದರೂ ಹೂಡಿ ಹಣಗಳಿಸಿರಿ. ಇನ್ನೊಂದು ವಿಚಾರವನ್ನು ಹೇಳಬಯಸುತ್ತೇನೆ. ದಯವಿಟ್ಟು ನಮ್ಮ ಹೆಡ್ಮಾಸ್ತರರು ಕೋಪಿಸಿಕೊಳ್ಳಬಾರದು. ಸಂಪಾದನೆಯ ಎರಡರಷ್ಟು ಸಾಲತಂದು ತಿಂದು ಕೂಡಬಾರದು. ಪ್ರಾಣಹೋದರೂ ಹಣವನ್ನು ವೆಚ್ಚಮಾಡಕೂಡದು. ಆಗ ಗೌರವವು

ನಿಮ್ಮನ್ನೇ ಹುಡುಕುತ್ತ ಒರುತ್ತದೆ. ನಮಗೆ ರಾಜಕೀಯ ರಂಗದ ಗೊಡವೆ ಬೇಡ. ಯಾರು ಏನಾದರೂ ಮಾಡಿಕೊಳ್ಳಲಿ. ಆದರೆ ಸಮಯ ನೋಡಿ ಒಂದೊಂದು ಬಾರಿ ಹಣವನ್ನು ಕೈ ಬಿಡಬೇಕು. ಇದು ಜಾಣರ ಲಕ್ಷಣ. ಹಣವನ್ನು ಕೈಬಿಡುವದೆಂದರೆ ಒಳ್ಳೆಯ ಭೂಮಿಯಲ್ಲಿ ಬಿತ್ತಿದಂತಾಗಬೇಕು. ಕಾಂಗ್ರೆಸ್ಸು ಜೇಲಿನಲ್ಲಿ ಬಿದ್ದು ಒದರುತ್ತಿದ್ದಾಗ ನಾನು ವಾರ್ ಫಂಡಿಗೆ ಹೇರಳ ವಾಗಿ ಹಣ ಕೊಟ್ಟಿದ್ದೇನೆ. ಇಲ್ಲದಿದ್ದರೆ ಧರ್ಮಸೇವಾಧುರೀಣ ಹೇಗೆ ಆಗು ತ್ತಿದ್ದೆ ? ಈಗಲಾದರೂ ಅದರಂತೆಯೇ ಗಾಂಧಿ ನಿಧಿಗೂ ಕೊಡುತ್ತಿದ್ದೇನೆ. ಇಂದಿಲ್ಲ ನಾಳೆ ಪ್ರತಿಫಲವು ತಾನೇ ಬರುತ್ತದೆ. ಈಗಾಗಲೇ ಕೊಂಚ ಕೊಂಚ ಬರಹತ್ತಿದೆ. ಕಾರಣ ನೀವೆಲ್ಲರೂ ವ್ಯಾಪಾರಿಗಳಾಗಿರಿ. ಗಾಂಧೀಜಿಯವರೇ ಸ್ವತಃ ವ್ಯಾಪಾರಿ ಜಾತಿಯವರಿದ್ದರು. ನಮಸ್ತೆ. (ಕೂಡುವರು)

**ಕಾಂಜೀವರಂ ಕಸ್ತೂರಿರಂಗನ್**

(ಮಕ್ಕಳ ಕಡೆ ನೋಡಿ) ಎಲ್ಲರೂ ಕೈ ತಟ್ಟಿರಿ.

(ಕೈ ತಟ್ಟುವರು)

**ದೇ। ಭ। ತಿಂಮ**

(ಎದ್ದು ನಿಂತು ಗಾಂಧೀಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ) ಮೋಹನರಾವ್, ಬಿ. ಎ. ಆನರ್ಸ್ಸ ಮಾತನಾಡುವರು.

**ಮೋಹನರಾವ್**

(ಒಂದೇ ಕಣ್ಣಿಗೆ ಕನ್ನಡಕವನ್ನು ಧರಿಸುತ್ತ ಎದ್ದು ನಿಂತು ಕುಲೀನ ಸ್ತ್ರೀಯರು ಕುಳಿತ ಪ್ರತ್ಯೇಕ ಸ್ಥಳವನ್ನು ನೋಡುತ್ತ) ಮೈ ಡಿಯರ್ ಲೇಡೀಜ್, ಮಿಸ್ಟರ್ ಪ್ರೆಸಿಡೆಂಟ್ ಮತ್ತು ಜಂಟಿಲಮನ್....

**ದೇ। ಭ। ತಿಂಮ**

(ನಡುವೇ ಬಾಯಿಹಾಕಿ) ಕನ್ನಡ ಕನ್ನಡ....ಕ್ಯಾನರೀಜದಲ್ಲಿ ಸ್ಪೀಚ್ ಮಾಡಬೇಕು ಪ್ಲೀಜ್.

**ವೀರಯ್ಯ ಬಿತ್ತದ್**

ಹೊಡಿಲಿಬಿಡ್ರೀ ಇಂಗ್ರೇಜಿದೊಳಗೇ, ನಮ್ಮ ಹುಡುಗರು ಎಂದು ಕೇಳ ಬೇಕು, ನಾವಾರೆ ಎಂದು ಕೇಳಬೇಕು....

**ಕಾಂಜೀವರಂ ಕಸ್ತೂರಿರಂಗನ್**

ಇಲ್ಲಿ ಯಾರಿಗೂ ತಿಳಿಯೋಲ್ಲವಲ್ಲ ? ಅಧ್ಯಕ್ಷರು ಸೂಚಿಸಿದಂತೆ....

**ವೀರಯ್ಯ ಬೆತ್ತದ್**

ಅದು ತಿಳಿಯೋದಾರಿ ಯಾಕೆ ಬೇಕ್ರೀ ? ದೊಡ್ಡೂರ ವ್ಯಾಪಾರಸ್ಥರು ಹಗಲು ಮ್ಯಾಟನಿ ನೋಡಿದ್ಹಂಗೆ ಇರ್ತದೆ. ಇರ್ಲಿ ಹೊಡೀರಿ ಕುಲಕರ್ಣೀರೆ, ಒಂದು ಝುಪಾಟಿ.

**ದೇ। ಭ। ತಿಂಮು**

ಇದು ಎಂದಿಗೂ ಇಂಪಾಜಿಬಿಲ್ಲು-ಸಾಧ್ಯವಿಲ್ಲ. ಅರ್ಧಂಬರ್ಧ ತಿಳೀದಾದ ಭಾಷೆಯಲ್ಲಿ ಇಲ್ಲಿ ಬಿಸಿನೆಸ್ಸು ನಡೆದರೆ ನಾನ್ಯಾಕೆ ಇಲ್ಲಿ ಕೂಡಬೇಕು ? ಅದೂ ಅಲ್ಲದೆ....ನಾನು ಜೇಲಿ....

**ಕಾಮ್ರೇಡ್ ಅಪ್ರಮೇಯ**

(ನಡುವೆ ಬಾಯಿಹಾಕಿ) ಹಾಗಾದರೆ ಶಾಸನಸಭೆಗೆ ಏಕೆ ಸ್ವಾಮೀ ತಾವು ಹೋಗೋದು ? ಅಲ್ಲಿ ಮಾತ್ರ ನಿಮ್ಮ ಕನ್ನಡದಲ್ಲಿಯೇ ನಡೆಯುತ್ತೆಯೇ ವ್ಯವಹಾರ ? ಮಾತನಾಡಿದವರ ಹೆಸರು ಕೇಳಿ ಕೈ ಎತ್ತಲ್ಲವೆ ನೀವು ?

**ದೇ। ಭ। ತಿಂಮು**

(ಅಧಿಕಾರ ವಾಣಿಯಿಂದ) ಆರ್ಡರ್ ಆರ್ಡರ್ (ಮುಂದಿದ್ದ ಮೇಜು ಗುದ್ದಿ ) ಎಲ್ಲರೂ ಸೈಲೆನ್ಸ್ ಆಗತಕ್ಕದ್ದು. ಅಲ್ಲಾ ಸೈಲೆಂಟ್ ಆಗತಕ್ಕದ್ದು. ....ಅಲ್ಲಾ....ಸೈಲೆನ್ಸೇ ಆಗತಕ್ಕದ್ದು. ( ಗಾಂಧೀ ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ) ನಾನು ಜೇಲಿನಲ್ಲಿದ್ದಾಗ....ಅದಿರಲಿ, ಇವತ್ತಿನ ಮೀಟಿಂಗಿಗೆ ಪ್ರಸಿಡೆಂಟ್ ನಾನು. ನನ್ನ ಪರ್ಮಿಶನ್ ಇಲ್ಲದಲೆ ಯಾರೂ ಸ್ಪೀಚ್ ಮಾಡಕೂಡದು. ನಾನ್ ಕ್ಯಾನರೀಜದಲ್ಲಿ ಸ್ಪೀಚ್ ಮಾಡಲು ನಾನು ಅಲೌ ಮಾಡೋದಿಲ್ಲ. ಇಂಡಿಯಾಕ್ಕೆ ಫ್ರೀಡಂ ಬಂದ ಮೇಲೂ ನಾವು ಎವ್ವರಿ ಸ್ಪೀಚ್ಚಿಗೂ ಇಂಗ್ಲೀಷು ತರೋದು ನಮ್ಮ ಮದರ್ ಕಂಟ್ರೀಗೆ ರೆಸ್ಪೆಕ್ಟ್ ಅಲ್ಲ. ಫಾರಿನ್ ಲ್ಯಾಂಗ್ವೇಜು ಆದ ಇಂಗ್ಲೀಷನ್ನು ನಾವು ಕಂಪ್ಲೀಟಾಗಿ ಬಾಯ್ಕಾಟ್ ಮಾಡಲೇಬೇಕು. ಒಂದು ವರ್ಡ್ನನ್ನೂ ಯೂಜ್ ಮಾಡ ಬಾರದು ಅನ್ನುವದು ನನ್ನ ಫರ್ಮ್ ಒಪೀನಿಯನ್ನು........

**ಕಾಂಜೀವರಂ ಕಸ್ತೂರಿರಂಗನ್**

(ಮಕ್ಕಳಕಡೆ ತಿರುಗಿ) ಎಲ್ಲರೂ ಹಿಯರ್ ಹಿಯರ್ ಎಂದು ಕೂಗಿರಿ. (ಒಬ್ಬೊಬ್ಬರೆ 'ಹಿಯರ್ ಸಾರ್' 'ಹಿಯರ್ ಸಾರ್' ಎಂದು ಕೂಗುವರು. ಕಡೆಗೆ ರಾಮಾಚಾರಿ 'ಪ್ರೆಜೇಂಟ್ ಸಾರ್' ಎಂದು ಕೂಗುವನು. ವೀರಯ್ಯನವರ ಚಿತ್ತವು ಬೆನ್ನಿಗೆ ಇಳಿಯುವದು.)

**ದೇ। ಭ। ತಿಂಮ**

ಮೋಹನರಾಯರು ಸ್ಪೀಚ್ ಕೊಡುವದಿದ್ದರೆ ಕನ್ನಡದಲ್ಲಿ ಕೊಡಲಿ. ಇಲ್ಲವಾದರೆ ಬಿಡಲಿ. ಇದು ನನ್ನ-ಅಂದರೆ ಪ್ರೆಸಿಡೆಂಟಿನ-ಆರ್ಡರು. (ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ) ನಾನು ಜೇಲಿನಲ್ಲಿದ್ದಾಗ....

**ಮೋಹನರಾವ್**

(ತಡಬಡಿಸುತ್ತ ಟೈಗಂಟನ್ನು ಜಗ್ಗಿ) ಮದರ್ ಕಂಟ್ರೀ ಸೇವಕರಾದ ನಮ್ಮ ಪ್ರೆಸಿಡೆಂಟಿಗೆ ಹೆಡ್ಮಾಸ್ತರ ಮದರ್ಟಂಗ್ ಬಂದಷ್ಟು ಇಂಗ್ಲೀಷು ಬಾರದಿರುವದು ನಮ್ಮೆಲ್ಲರ ಬ್ಯಾಡ್ ಲಕ್ಕು. ನಾನು ಅಮೇರಿಕೆಯಲ್ಲಿದ್ದಾಗ....ನಾನು.... ಅದಿರಲಿ....ನನಗೆ ಈ ಕನ್ನಡದ ಕಾಂಟ್ಯಾಕ್ಟು ಇಲ್ಲ. ನನ್ನ ಹೆಡ್‌ನಲ್ಲಿ ಐಡಿಯಾಜು ಫುಲ್ ಅವೆ. ಅವು ಇಂಗ್ಲೀಷಿನಲ್ಲಿ ಪವರ್‌ಫುಲ್ಲಾಗಿ ಎಕ್ಸ್‌ಪ್ರೆಸ್ ಆದಷ್ಟು ಬೇರೆ ಪೂರ್ ಲೋಕಲ್ ಲ್ಯಾಂಗ್ವೇಜಗಳಲ್ಲಿ ಆಗುವದು ಇಂಪಾಜಿಬಿಲ್ಲು. ನಾನು ಅಮೇರಿಕೆಯಲ್ಲಿದ್ದಾಗ....ಅದಿರಲಿ....ನಾನು ನನ್ನ ಸ್ಪೀಚನ್ನು ಇಂಗ್ಲೀಷಿನಲ್ಲಿಯೇ ಮಾಡುತ್ತೇನೆ. ಯಾಕೆಂದರೆ ಮಿಸ್ಟರ್ ಗಾಂಧೀಗೆ ಇಂಗ್ಲೀಷ್ ಲವ್ವು ಪ್ಲೆಂಟಿ ಇತ್ತು. ಈ ನ್ಯಾರೊ ವರ್ನ್ಯಾಕುಲರಿಜಂ ಬಂದು ಅನ್‌ಬಿಕಮಿಂಗು ಆಫ್ ಒನ್ ವರಲ್ಡು........

**ದೇ। ಭ। ತಿಂಮ**

(ನಡುವೆ ಬಾಯಿಹಾಕಿ ದರ್ಪದಿಂದ) ಮೋಹನರಾಯರು ಸ್ಪೀಚ್ ಸ್ಟಾಪ್ ಮಾಡಬೇಕು ಪ್ಲೀಜ್. ಇಷ್ಟು ಇಂಗ್ಲೀಷ ವರ್ಡ್ಸ್ ಯೂಜು ಮಾಡಿದರೆ ಇದು ಕ್ಯಾನರೀಜ ಆಗೋದಿಲ್ಲ.

**ಮೋಹನರಾವ್**

(ಟೈಗಂಟನ್ನು ಜಗ್ಗುತ್ತ ಸಿಡಿಮಿಡಿಮಾಡಿ) ನಾನು........ಅಮೇರಿಕೆಯಲ್ಲಿ ನಾನಿದ್ದಾಗ....ನಾನು ಅಮೇರಿಕೆಯಲ್ಲಿದ್ದಾಗ....ನನ್ನ ಕೊಲೀಗ್ ಒಬ್ಬರು

ಹೇಳುತ್ತಿದ್ದರು; ಈ ಇಂಡಿಯಾ ಒಂದು ಬಟ್ಲರ್ ಜನರ ಕಂಟ್ರೀ ಅಂತ. ಆ ಮಾತು ಈಗ ಪೂರ್ತಿ ಪ್ರೂವ್ಡ್ ಆತು. ನನ್ನ ಸ್ಪೀಚಿಗೆ ಈ ಪ್ರೆಸಿಡೆಂಟು ಅನ್‌ಫಿಟ್ಟು. ಕಾರಣ ನಾನು ಪ್ರೊಟೆಸ್ಟ್ ಮಾಡಿ ವಾಕ್‌ಔಟ್ ಮಾಡ್ತೀನಿ. ನಾನು ಅಮೇರಿಕೆಯಲ್ಲಿದ್ದಾಗ (ಟೈಗಂಟನ್ನು ಜಗ್ಗಿ, ಒಂದು ಕಂಠಿನ ಕನ್ನಡಕವನ್ನು ತೆಗೆದು ನೇತಾಡಲು ಬಿಟ್ಟು ಹೊರಡುವನು.)

## ದೇ। ಭ। ತಿಂಮು

(ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗುತ್ತ ಎದ್ದುನಿಂತು ಕಾರ್ಯಕ್ರಮವನ್ನು ನೋಡಿ) ತಸೀಲ ಕಚೇರಿ ಪೊಂಪಾಪತಿಭಟ್ಟರು ಮಾತನಾಡುವರು.

## ಪೊಂಪಾಪತಿ ಭಟ್ಟರು

(ಕಿವಿಯ ಮೇಲೆ ಕುಳಿತಿರುವ ಲೆಕ್ಕಣಿಕೆಯ ಅರಿವು ಇಲ್ಲದಲೆ) ಸಾರ್, ನಾನು ನೋಡ್ರಿ ಸಾರ್, ಸರಕಾರೀ ನೌಕರ ಸಾರ್; ತತ್ರಾಪಿ ನಾನ್‌ಗೆಜೆಟೆಡ್ ಜಾತಿಯವನು ಸಾರ್. ನಾನೂ ನಾಲ್ಕು ಮಂದ್ಯಾಗೆ ನಿಂತು ಮಾತಾಡೋ ಹಕ್ಕನ್ನು ಸಾರ್ ೪೫-೩-೭೦-೨-೮೦ ರೂಪಾಯಿಗಳ ಪಗಾರದ ಸ್ಕೇಲಿಗೆ ಮಾರಿಕೊಂಡು ಬಿಟ್ಟೀನಿ ಸಾರ್. ಅದೇ ಕಾರಣದಿಂದ ನೋಡ್ರಿ ಸಾರ್, ನನ್ನ ಇಬ್ಬರು ಮಕ್ಕಳು ಮತ್ತು ನನ್ನ ಒಬ್ಬ ಹೆಂಡತಿ ಮನ್ಯಾಗೆ ಇದ್ದಾಗ ಸಾರ್, ನಾನು ಪಿಟ್ ಅಂಬೋದಿಲ್ಲ ಸಾರ್. ಯಾಕಂದ್ರೆ ನೋಡ್ರಿ ಸಾರ್, ನನ್ನೂ ಸೇರಿ ನಾಲ್ಕು ಮಂದಿ ಆಗಿಬಿಡ್ತೀವಿ ಸಾರ್. ನನ್ನ ಕೆಲಸಕ್ಕೆ—ಅಂದ್ರೆ ನನ್ನ ನಮ್ಮೆಲ್ಲಾರ ಅನ್ನಕ್ಕೂ ಚಕ್ರ ಬೀಳ್ತದೆ ಸಾರ್. ವಿಕ್ಟೋರಿಯಾ ಮಹಾರಾಣಿ ಮದುವೆ ಕಾಲಕ್ಕೆ ಗವರ್ನಮೆಂಟು ಸರ್ವೆಂಟ್ಸ್ ಕಾಂಡಕ್ಟು ರೂಲ್ಸು ಅಂಬೋ ವೇದ ಹುಟ್ಟಿತು ಸಾರ್. ಇಂಗ್ಲೀಷಿನವರು ಮೊನ್ನೆ ನಮ್ಮ ದೇಶ ಬಿಟ್ಟು ಹೋಗುವಾಗ ಎಲ್ಲ ಸಾಮಾನುಗಳನ್ನೂ ಸ್ಟೀಮರಿಗೆ ಹಾಕಿದರು ಸಾರ್. ಸ್ಟೀಮರು ತುಂಬಿಬಿಡ್ತು ಸಾರ್ ಆಗ. ಇನ್ನೊಂದೇ ಪುಸ್ತಕ ದಂಡೆ ಮೇಲೆ ಉಳಿದಿತ್ತು ಸಾರ್, ಸ್ಟೀಮರಿನ ಕಂಡಕ್ಟರು ' ರೈಟ್ ' ಅಂದುಬಿಟ್ಟ ಸಾರ್. ಇದು ಒಂದು ಹಾಕ್ತೀವಿ ನಿಲ್ಲೋ ನಿಲ್ಲೋ ಅಂದ್ರೆ, ಬ್ಯಾಡಾ ಹಡಗ ಮುಳುಗೀತು ಅಂದು ಚಾಲೂ ಮಾಡೇಬಿಟ್ಟ ಸಾರ್. ಇನ್ನ ಸಾಕು ಸಾರ್ ಈ ಸುದ್ದಿ. ನಾನು ಹೀಗೇ ನಿಂತು ಮನುಷ್ಯರಂತೆ ಭಾಷಣಮಾಡಿದರೆ ಭಾಷಣ ಮಾಡಿದ ಈ ಬಾಯಿಗೆ ಗ್ಯಾರಂಟಿ

ಮಾಂಣಾ ಬೇಳ್ಬದೆ ಸಾರ್. ನಾನು ಇಲ್ಲಿ ಮಾತಾಡಿದೆ ಅಂದು ನೀವೂ ಯಾರ ಮುಂದೂ ಹೇಳಬ್ಯಾಡ್ರಿ ಸಾರ್. ಇದು ಕಾನ್‌ಫಿಡೆನ್ಸಿಯಲ್ ಸಾರ್. ನಾನು ಕೂಡ್ತೀನಿ ಸಾರ್ (ಕುಳಿತುಕೊಳ್ಳುವನು.)

### ಕಾಂಜೀವರಂ ಕಸ್ತೂರಿರಂಗನ್

ಮಕ್ಕಳಿಗೇನಾದರೂ ಹಿತೋಕ್ತಿಯನ್ನು ಹೇಳಿ ಭಟ್ಟರೇ.

### ಪೊಂಪಾಪತಿ ಭಟ್ಟರು

ಇಷ್ಟು ಹೊತ್ತು ಹೇಳಿದೆನಲ್ಲ ಸಾರ್ ?

### ಕಾಂಜೀವರಂ ಕಸ್ತೂರಿರಂಗನ್

ಅದೆಲ್ಲವೂ ಅಧ್ಯಕ್ಷರಿಗಲ್ಲವೇ, ಮಾತಿಗೊಮ್ಮೆ ಸಾರ್ ಸಾರ್ ಎಂದು ಹೇಳಿದ್ದು. ಚಿಕ್ಕ ಮಕ್ಕಳನ್ನೂ ಸಾರ್ ಅಂತೀರಾ ?

### ಪೊಂಪಾಪತಿ ಭಟ್ಟರು

ಅಂತೇನೆ ಸಾರ್, ಅಭ್ಯಾಸ ಸಾರ್, ಅದು ಸಾರ್ ಅಂಬೋದು ಸಾರ್, ನಾನು ನೋಡಿ ಸಾರ್, ನನ್ನ ಗಂಡನನ್ನೂ- ಅಲ್ಲ–ನನ್ನ ಹೆಂಡತಿಯನ್ನು ಕೂಡಾ ಸಾರ್ ಸಾರ್ ಎಂದೇ ಕರೆದುಬಿಡುತ್ತೇನೆ ಸಾರ್. ನಾನು ಅವಳನ್ನು ಕರೆಯುವದೇ ಇಲ್ಲ ಅಂತ ಇಟುಗೊಳ್ಳಿ ಸಾರ್....

### ಕಾಂಜೀವರಂ ಕಸ್ತೂರಿರಂಗನ್

ಅದಿರಲಿ ಭಟ್ಟರೇ, ನಿಮ್ಮ ಅನುಭವದಿಂದ ಮಕ್ಕಳಿಗೇನಾದರೂ ಒಂದು ಸಂದೇಶವನ್ನು ಹೇಳಿ.

### ಪೊಂಪಾಪತಿ ಭಟ್ಟರು

ನಾನು ನೋಡಿ ಸಾರ್, ಅಲ್ಲಾ ವಿದ್ಯಾರ್ಥಿಗಳೇ, ನಾನು ದಿನಕ್ಕೆ ಇಪ್ಪತ್ನಾಲ್ಕು ತಾಸು ಕೆಲಸ ಮಾಡುತ್ತೇನೆ ಕಚೇರಿಯಲ್ಲಿ; ಉಳಿದ ನಾಲ್ಕು ತಾಸು ಮನೆಯಲ್ಲಿ ಮಾಡುತ್ತೇನೆ ಕಚೇರಿ ಕೆಲಸವನ್ನು. ನೀವು ಕೇಳಬಹುದು, ನಮ್ಮ ಮುಖ್ಯಮಂತ್ರಿಗಳೂ ಮಾಡುತ್ತಾರಲ್ಲ ಇಡೀ ದಿವಸ ಎಂದು. ಅವರಿಗೂ ನನಗೂ ಇಷ್ಟೇ ಭೇದ– ಅವರ ಕೆಲಸದಲ್ಲಿ ಬುದ್ಧಿ ಇದೆ, ನನ್ನ ಕೆಲಸದಲ್ಲಿ ಮುದ್ದಿ ಇದೆ. ಹೋಗಲಿ ಬಿಡಿ. ಸುಬ್ಬಶ್ರೇಷ್ಠಿಗಳು ಹೇಳಿದಂತೆ ವ್ಯಾಪಾರ ಮಾಡಿರಿ. ಇಲ್ಲವಾದರೆ ಸಾರ್–ಅಲ್ಲಾ ವಿದ್ಯಾರ್ಥಿಗಳೇ– ಏನನ್ನಾದರೂ

ಮಾಡಿರಿ. ನಿಮ್ಮಪ್ಪ ಅವ್ವ ಹೇಳಿದ್ದು, ಆದರೆ ನನ್ನಂತೆ ಮಾತ್ರ ಆಗಬೇಡಿರಿ. ನಾನು ಕೊಡುತ್ತೇನೆ ಸಾರ್–ಅಲ್ಲಾ ವಿದ್ಯಾರ್ಥಿಗಳೇ (ಕೂಡುವನು. ಕೂಡಲೇ ಎದ್ದು) ಇನ್ನೊಂದು ಹೇಳಲು ಮರೆತಿದ್ದೆ ಸಾರ್. ನನ್ನ ಮಗನಂತೆ ಆರ್. ಎನ್. ಎಸ್. ಮಾತ್ರ ಆಗಬೇಡಿ, ನಿಮ್ಮಾಣೆ ಇದೆ ಆದಗೀದರೆ (ಕೂಡುವನು)

## ದೇ। ಭ। ತಿಂಮ

(ವಿದ್ಯಾರ್ಥಿಗಳನ್ನು ಕುರಿತು) ಎಲ್ಲರೂ 'ಷೇಮ್' ಎಂದು ಕೂಗಿರಿ.

(ಎಲ್ಲರೂ 'ಸೇಮ್' 'ಸೇಮ್' ಎಂದು ಕೂಗುವರು)

ಈಗ ಕಾಮ್ರೇಡ್ ಅಪ್ರಮೇಯ ಮಾತನಾಡುವರು.

## ಕಾಮ್ರೇಡ್ ಅಪ್ರಮೇಯ

(ಸೋಡಾ ಬಾಟಲ್ ವಡೆದಂತೆ) ಟೋಟಲಟೇರಿಯನ್ ಗವರ್ನ್ಮೆಂಟು ಇದು. ಪ್ರೊ ಕ್ಯಾಪಿಟಲಿಸ್ಟ್ ಇದೆ. ನಮಗೆ ಪ್ರೊಟಲಿಟೇರಿಯಟ್. ಗವರ್ನ ಮೆಂಟು ಬೇಕು. ಈ ಬೂರ್ಜವಾ ಗವರ್ನಮೆಂಟು ಹೋಗಲೇಬೇಕು. ಬಿರ್ಲಾ ಟಾಟಾ ಸುಬ್ಬಶ್ರೇಷ್ಠಿ ಗಣಪತಿಗಳ ಬೊಜ್ಜು ಬೆಳೆಸುವ ಸಲುವಾಗಿ ಲೇಬರ್ ಜನರ ರಕ್ತ ಸುಟ್ಟು ಹೋಗುತ್ತಲಿದೆ. ವಿದ್ಯಾರ್ಥಿಗಳಾದ ನೀವೆಲ್ಲರೂ ಮೊದಲು ಸಂಪು ಹೂಡಲು ಕಲಿಯಬೇಕು. ನಿಮ್ಮ ಮಾಸ್ತರರಿಗೂ ಕಲಿಸಬೇಕು. ಇಂದು ನೋಡಿರಿ. ಇಡೀ ಜಗತ್ತಿಗೇ ಬೆಳಕು ಕೊಡುತ್ತಿರುವ ರಸಿಯಾ ದೊಂದಿಗೆ ಅಮೆರಿಕೆ ಮುಂತಾದ ಭಾಂಡವಲಶಾಹೀ ಭಂಡರಾಷ್ಟ್ರಗಳು ಕಾಲ್ಕೆದರಿ ಜಗಳ ಮಾಡಲು ಕಾದು ಕುಳಿತಿವೆ. ವಿದ್ಯಾರ್ಥಿಗಳೇ! ನನ್ನ ಈ ಮಾತು ಸಂಪೂರ್ಣ ಸತ್ಯವಿದೆ. ಬೇಕಾದರೆ ಬರೆದಿಟ್ಟುಕೊಳ್ಳಿ. ಇಂದಿನ ಬಾಲ ಕರೇ ನಾಳಿನ ತರುಣರು. ಇಂದಿನ ತರುಣರೇ ನಾಳಿನ ವೃದ್ಧರು. ಆದಕಾರಣ ಬಡವರ ಸುಲಿಗೆ ನಿಲ್ಲಬೇಕು. ಬಡವರ ರಕ್ತಹೀರುವ ಧನಿಕರ ತಲೆಯನ್ನೊಡೆ ಯಿರಿ. ಮಹಾತ್ಮಾ ಗಾಂಧೀಯವರೇ ಸ್ವತಃ ಕಮ್ಯೂನಿಸ್ಟರಿದ್ದರು. ಬೇಕಾದರೆ ಕೇಳಿಬನ್ನಿರಿ. ಕೂಲಿಕಾರರ ಸಲುವಾಗಿ ಹೋರಾಡಲು ನಮ್ಮ ಪಾರ್ಟಿಯು ಸದಾ ಸಿದ್ಧವಿದೆ, ನಿಮ್ಮ ಸೊಂಟಕಟ್ಟಿ ನಿಂತಿದೆ. ನಮ್ಮ ರಾಜ್ಯವು ಬಂದಮೇಲೆ ಈ ಅನ್ಯಾಯಗಳು ಜರುಗಲಾರವು. ಹೊಲಗಳು ದುಡಿಯುವ ಎತ್ತುಗಳವಾಗ ಬೇಕು, ಮೋಡ ಮಿಂಚು ಮಳೆ ಮುಂತಾದವು ಮುಗಿಲಿನವಾಗಬೇಕು, ಮೋಟಾರ ಗಾಡಿಗಳು ಟಯರು ಟ್ಯೂಬಿನವಾಗಬೇಕು, ರೈಲುಗಳು ಹಳಿಗಳ

ವಾಗಬೇಕು, ಪ್ರಯಾಣಿಕರ ಟ್ರಂಕು ಹಾಸಿಗೆಗಳು ಪೋರ್ಟರವಾಗಬೇಕು, ಕಚೇರಿಗಳು ಕಸಗುಡಿಸುವವರಾಗಬೇಕು, ಬಟ್ಟೆಗಳು ಕತ್ತೆಗಳವಾಗಬೇಕು, ವಿದ್ಯಾರ್ಥಿಗಳ ಕಿವಿಗಳು ಮಾಸ್ತರವಾಗಬೇಕು, ನಮ್ಮ ನಿಮ್ಮ ತಲೆಗಳು ಕ್ಷೌರಿಕರವಾಗಬೇಕು. ದುಡಿಯುವವನೇ ಒಡೆಯ. ತಲೆಯಮೇಲೆ ಜುಟ್ಟಿನ ಅಧಿಕಾರವೇಕೆ ? ನಾನು ನಿಮ್ಮ ಹಿತದ ಸಲುವಾಗಿ ಪ್ರಾಣವನ್ನು ಕೊಡಲು ಸಹ ಅಂಜುವದಿಲ್ಲ. ನನಗೆ ಯಾರ ಭಯವೂ ಇಲ್ಲ. ನಾನು ದೇವರಿಗೂ ಅಂಜುವದಿಲ್ಲ, ಏಕೆಂದರೆ ರಸಿಯಾದಲ್ಲಿ ದೇವರೇ ಇಲ್ಲ. ಈ ಮಾತನ್ನು ದೇವ ರಾಣೆಯಾಗಿ ಹೇಳುತ್ತೇನೆ. ನಾನು ಯಾರನ್ನಾದರೂ ಇದುರಿಸಲು ಸಿದ್ಧನಿದ್ದೇನೆ. ಸಾಕ್ಷಾತ್ ಯಮನೇ ಬಂದರೂ ನಾನು ಜುಂ ಎನ್ನುವದಿಲ್ಲ. ಆದರೆ ಸದ್ಯ ಈಗೊಬ್ಬ ಪೋಲೀಸ್ ಸಿಪಾಯಿಯು ಬೆನ್ನು ಹತ್ತಿದ್ದಾನೆ. ಕಾರಣ ನಾನು ಈ ಕ್ಷಣವೇ ಅಂಡರ್ ಗ್ರೌಂಡ್ ಹೋಗಿಬಿಡುತ್ತೇನೆ ಕಾಮ್ರೇಡ್ಸ್....
( ಅಂಡರ್ ಗ್ರೌಂಡ್ ಹೋಗುವನು. )

**ದೇ| ಭ| ತಿಂಮು**

( ಎದ್ದು ನಿಂತು ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ )
ನಾನು ಜೇಲಿನಲ್ಲಿದ್ದಾಗ.........ಜೇಲಿನಲ್ಲಿ ನಾನಿದ್ದಾಗ........

**ಕೆಂಚ**

( ದೇ| ಭ| ತಿಂಮ್ಮನನ್ನು ಕುರಿತು ) ಅಲ್ರೀ ದಣೇರಿ, ಎಲ್ಲಾರೂ ಈಟಾ ಕೊಂದು ಮಾತಾಡಿರ್ರೀ, ನನ್ನಂತ ಅಳ್ಳಿ ಮಂಕಿಗೇನೋ ಎಲ್ಲಾನೂ ಅಡ್ಡ ಗ್ವಾಡೇ ನೋಡ್ರಿ. ಇದೆಲ್ಲ ಹಂಗಿರ್ಲಿ, ನಮ್ಮೂರ ಕೆರೀದು ತುಂಬಾ ಕೆಟ್ಟೈತ್ರಿ, ಮೂರು ವರಸ ಆತು ಈ ಮಾತಿಗೆ. ಕೆರಿ ತುಂಬಿ ಮೂರೇ ದಿನದಾಗೆ ಖಾಲಿ ಆಗಿ ಬಿಡತೈದ್ರಿ ಕೆರಿ. ಹೆಂಗೂ ಸರಕಾರಾನೂ ನಿಮ್ದೇ ಐತಿ ಅಂತ ಕೇಳೀನಿ. ನೀರು ಒಂದೀಟು ಕೆರಿಯಾಗೆ ನಿಂದ್ರೋಹಂಗೆ ಮಾಡಿ ಪುಣ್ಯಾವು ಕಟಿಗೊಳ್ರಿ. ಇಡೀ ಊರಿಗೇ ಬದುಕಿಸಿದೋಟು ಪುಣ್ಯ ಬರತೈತಿ ನೋಡ್ರಿ....

**ದೇ| ಭ| ತಿಂಮು**

( ಗಂಭೀರ ಮುಖಮುದ್ರೆಯಿಂದ ಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ)ಇದೂ....ಇದೂ ಕೇಂದ್ರ ಸರಕಾರಕ್ಕೆ ಸಂಬಂಧಿಸಿದ ಪ್ರಶ್ನೆ. ಅದರ ಆಡಳಿತೆಯಲ್ಲಿ ನಾನು ಕೈಹಾಕುವದು ಸರಿಯಲ್ಲ. ಏಕೆಂದರೆ....ನಾನು ಜೇಲಿನಲ್ಲಿದ್ದಾಗ....

**ಕೆಂಚ**

ಮತ್ತೆ ಹೆಂಗ್ರೀ ಹಂಗಾರೆ ? ಅದಿರ್ಲಿ ಬಿಡ್ರಿ, ನಿಮ್ಮಂತವ್ರಿಗೆ ಕೇಳೋ ಬದಲು ಆ ಅಧಿಕಾರಸ್ತರಿಗೇ ಈಟು ಕೈ ಬಿಸಿ ಮಾಡಿದರೆ ಮನೀಮಕ್ಕಳಹಂಗೆ ಮಾಡಿಕೊಡ್ತಾರೆ ಮೂರೇ ದಿನದಾಗೆ. ಇದೆಲ್ಲ ಏನು ಪ್ವಾಡ ಕೆಲಸರೀ ದಣೇರ? ನಮ್ಮ ರೈತರು ಹಂಗೆ ಒಕ್ಕಟ್ಟು ಇದ್ದಿದ್ದರೆ ಮನಿಗೊಂದು ಆಳು ಕೊಟ್ಟು ಮುಗಿಸೇ ಬಿಡತಿದ್ವಿ. ನಮ್ಮ ಕುಲಕರ್ಣೇರೂ ಚಳುವಳಿ ನೆಡಿಸಿ ರಾಜಿನಾಮಿ ಕೊಟ್ರು ಅಂತ ಹಿಂಗೆ ಆಗೇತಿ; ಇಲ್ಲಾ ಅಂದ್ರೆ ಊರಾಗೆ ಚಂದಾಮಾಡಿ ತಮ್ಮ ಬಾಬು ತಾವು ತಕ್ಕೊಂಡು ನಮ್ಮ ಕೆಲಸಾನೂ ಮಾಡ್ತಿದ್ರು. ಅಲ್ರಿ ದಣೇರೆ, ನಮ್ಮೂರ ಹಳ್ಳದ ಮ್ಯಾಗಿನ ರಸ್ತೆ ಕೆಟ್ಟು ವಾರಾ ಎರಡು ಬಂಡಿ ಉಳ್ತಾವ ನೋಡ್ರಿ. ಮನ್ನೆ ಅಮಾವಾಸಿ ದಿನ ಒಂದು ಹುಡುಗನ ಪ್ರಾಣಾನ ತಿಂತು. ಈ ರಸ್ತೆ ಒಂದೀಟು ದುರಸ್ತ ಮಾಡಿಕೊಡ್ರೀ....

**ದೇ| ಭ| ತಿಂಮ**

ಇದೂ....ಇದು ನನಗೆ ಸಂಬಂಧಿಸಿದ ಪ್ರಶ್ನೆ ಅಲ್ಲ; ಅಲ್ಲದೆ ಈ ಎಲ್ಲ ಚಿಕ್ಕಪುಟ್ಟ ವಿಷಯಗಳಿಗೆ ನನಗೆ ಸಮಯವೂ ಇಲ್ಲ. ನಾನು ಈಗ ಬಂದಿರುವದು ಬೇರೆ ಕೆಲಸಕ್ಕಾಗಿ.ಮುಂಬರುವ ಚುನಾವಣೆಯಲ್ಲಿ ನಿಲ್ಲಬೇಕೆಂದು ನನಗೆ ಗುರುಗಳ ಆಜ್ಞೆಯಾಗಿದೆ.

**ಕೆಂಚ**

ಯಾರ್ರೀ, ದಣೇರೆ ಆ ಗುರುಗಳು ?

**ದೇ| ಭ| ತಿಂಮ**

ಆ ಗುರುಗಳು ಈಗ ಜೀವಂತವಿಲ್ಲ. ನನಗೆ ಸ್ವಪ್ನದಲ್ಲಿ ಬಂದು ಆಜ್ಞೆ ಮಾಡಿದ್ದಾರೆ. ( ಗಾಂಧೀಟೊಪ್ಪಿಗೆಯನ್ನು ಹಿಂದೊಮ್ಮೆ ಮುಂದೊಮ್ಮೆ ಜಗ್ಗಿ ) ನಾನು ಜೇಲಿನಲ್ಲಿದ್ದಾಗ....ಜೇಲಿನಲ್ಲಿ ನಾನಿದ್ದಾಗ....

**ಕೆಂಚ**

ನಮ್ಮೂರ ಮುಂದಿನ ರೆಸ್ತೀದು ಈಟು ಹೇಳ್ರಿ ದೇವ್ರು.

**ದೇ| ಭ| ತಿಂಮ**

ವಿದ್ಯಾಖಾತೆಯ ಮಂತ್ರಿಗಳ ಹತ್ತಿರ ಡೆಪುಟೇಶನ್ ಹೋದರೆ ಈ ಕೆಲಸವು ಆಗಬಹುದು. ಅನುಕೂಲ ಮಾಡಿಕೊಂಡು ನಾವೇ ಹೋಗುತ್ತೇವೆ.

ಆದರೆ ಅವಕ್ಕೆ ಬಹಳ ಖರ್ಚು ತಗಲಬಹುದು. ಅದಕ್ಕಾಗಿ ನೀವೆಲ್ಲರೂ ಚಂದಾ ಮಾಡಿ ನನ್ನ ಶವಕ್ಕೆ-ಅಲ್ಲಾ–ನನ್ನ ವಶಕ್ಕೆ ತಂದುಕೊಡಿರಿ. ಆಮೇಲೆ ಯೋಚಿಸುತ್ತೇನೆ. ಅಲ್ಲದೆ ಆ ಮಂತ್ರಿಗಳನ್ನು ಕಾಂಗ್ರೆಸ್ ಕಾರ್ಯಕಾರೀ ಮಂಡಳಿಯಲ್ಲಿ ತೆಗೆದುಕೊಳ್ಳುವ ಮಾತುಕತೆ ನಡೆದಿವೆ. ಆಗ ಅವರು ಆ ಮಂತ್ರಿಪದವಿಗೆ ರಾಜಿನಾಮೆ ಸಲ್ಲಿಸಬೇಕಾಗುವದು. ನನ್ನ ತ್ಯಾಗ, ಸೇವೆ, ಜಾತಿ ಮತ್ತು ವಸೀಲಿಗಳೆಲ್ಲವೂ ಉಪಯೋಗವಾದರೆ ನಾನೇ ಮಂತ್ರಿಯಾಗಿ ಬಿಡುತ್ತೇನೆ. ಯಾಕಂದರೆ.......

## ಕೆಂಚ

(ನಡುವೇ ಬಾಯಿಹಾಕಿ) ಯಾಕೆ ಅಂತ ನಾವ್ಯಾಕೆ ಅನ್ನಾಕ ಹೋಗಾನ್ರೀ ತಿಳದಮಾತಿಗೆ? ಅಲ್ರೀ ದಣೇರಿ, ಒರೀ ನಿಮ್ಮ ಕತೀನೆ ಹೇಳ್ತೀರಲ್ಲ? ಕೆರಿ ಸರಿ ಮಾಡಿಸಿ ಜನಕ್ಕೆ ರೊಟ್ಟಿ ಕೊಡೋ ಹಂಗಿಲ್ಲ, ರಸ್ತೆ ರಿಪೇರಿ ಮಾಡಿಸಿ ಜನರ ಜೀವ ಉಳಿಸೋ ಹಂಗಿಲ್ಲ. ಹಂಗಾರೆ ಏನು ಮಾಡ್ತೀರಿ ಅದನಾರೆ ಈಟು ಹೇಳ್ರಿ.

## ದೇ। ಭ। ತಿಂಮ

(ತಿರಸ್ಕಾರ ನಗುವಿನಿಂದ) ಹೂಂ, ಹಾಗೆ ಕೇಳೋ ಹುಚ್ಚಾ ನಾಡಹುಚ್ಚ. ಈ ಬಗ್ಗೆ ಈಗಾಗಲೆ ನಾನು ಯೋಚಿಸಿದ್ದೇನೆ. (ಗಾಂಭೀರ್ಯ ಅಟ್ಟಹಾಸದ ದನಿಯಿಂದ) ಈಗ ನಾವು ನಮ್ಮ ಭಾರತಾಂಬೆಯನ್ನು ಸ್ವತಂತ್ರಳನ್ನಾಗಿ ಮಾಡಿದ್ದೇವೆ. ಸ್ವತಃ ನಾನೇ (ಎದೆ ತಟ್ಟಿಕೊಂಡು) ಮಾಡಿದ್ದೇನೆ. ಪಾರತಂತ್ರ್ಯದಲ್ಲಿ ಬಿದ್ದು ನರಳುತ್ತ ಹೊರಳಾಡುತ್ತಿದ್ದ ಬಡಮಾತೆಯನ್ನು ನಾನು ಪಾರುಮಾಡಿದ್ದೇನೆ. ಪಾಶ್ಚಿಮಾತ್ಯರ ಸಂಕೋಲೆಯನ್ನು ನನ್ನ ಏಕಮೇವಾದ್ವಿತೀಯ ಪರಾಕ್ರಮದಿಂದ ಕಿತ್ತೆಸೆದಿದ್ದೇನೆ. ಇಂದು ನಮ್ಮ ಮಾತೆಯು ಎದೆ ಸೆಟೆಸಿ ನಿಲ್ಲುವಂತಾಗಿದ್ದಾಳೆ. ಉಳಿದ ರಾಷ್ಟ್ರಗಳೊಡನೆ ಬುಜಕ್ಕೆ ಬುಜ ಹಚ್ಚಿ ನಿಲ್ಲುವ ಗೌರವವನ್ನು ಪಡೆದಿದ್ದಾಳೆ. ಅಮೇರಿಕೆ ಮುಂತಾದ ಮಹಾ ಮಹಾ ರಾಷ್ಟ್ರಗಳಲ್ಲಿ ನಮ್ಮ ಸಂಬಂಧವು ಬೆಳೆಯಹತ್ತಿದೆ. ನಮ್ಮ ಆನೆ ಮರಿಗಳು ಅಲ್ಲಿಗೆಲ್ಲ ಹೋಗುತ್ತಿವೆ; ಈಗಲೂ ನಮ್ಮ ಹಳ್ಳಿಗಳು ಹೀಗೆ ಹಿಂದುಳಿಯಬಾರದು. ಹಳ್ಳಿಗಳ ಉದ್ಧಾರವೇ ನಮ್ಮ ದೇಶದ ಉದ್ಧಾರ. ಈ ಊರಿನ ಹೆಸರು ಹೇಳಿಕೊಳ್ಳಲು ಸಹ ನಾಚಿಕೆಯಾಗುವಂತಿದೆ. ಆದಕಾರಣ ಅಜ್ಜಿಯ ಕಾಲದ ಹೆಸರಾದ

ಈ ಕಾನಕಾನ ಹಳ್ಳಿ ಎಂಬುವನ್ನು ಬಿಟ್ಟು ಇನ್ನುಮೇಲೆ ಇದಕ್ಕೆ ಕನಕಾಪುರ ಎಂದು ಕರೆಯತಕ್ಕದ್ದು.

**ಕೆಂಚ**

ಏನ್ರೀ ದೇವ್ರು, ಹಂಗಂದ್ರೆ ?

**ಕಾಂಜೀವರಂ ಕಸ್ತೂರಿರಂಗನ್**

ಕನಕ ಎಂದರೆ ಗೊತ್ತಿಲ್ಲವೇನೋ ಮಂಕೆ ? ಹತ್ತೊಂಬತ್ತು ಅಲ್ಲವೇ ಅದರ ಸ್ಪೆಸಿಫಿಕ್ ಗ್ರ್ಯಾವಿಟಿ ? ಚಿನ್ನ ಚಿನ್ನ (ತಮ್ಮ ಕನ್ನಡಕವನ್ನು ಮುಟ್ಟಿ ತೋರಿಸುತ್ತ) ಚಿನ್ನ ಕಣೋ ಕನಕ ಎಂದರೆ.

**ದೇ। ಭ। ತಿಂಮು**

ನನ್ನ ಸೂಚನೆಯ ಮೇರೆಗೆ ಈ ಊರಿನ ಹೆಸರನ್ನು ಕನಕಾಪುರವೆಂದು ಬದಲಾಯಿಸಲು ನೀವೆಲ್ಲರೂ ಒಮ್ಮತದಿಂದ ಒಪ್ಪಿದ್ದೀರೆಂದು ನಾನು ತಿಳಿಯುತ್ತೇನೆ.

**ಕಾಂಜೀವರಂ ಕಸ್ತೂರಿರಂಗನ್**

(ಮಕ್ಕಳ ಕಡೆ ತಿರುಗಿ) ಎಲ್ಲರೂ ಒಪ್ಪಿದ್ದೇವೆ ಎನ್ನಿರಿ.(ಒಪ್ಪೀವ್ರಿ,ಒಪ್ಪೀವ್ರಿ ಎಂದು ಒಬ್ಬೊಬ್ಬರೇ ಕೂಗುವರು.)

**ದೇ। ಭ। ತಿಂಮು**

ನನ್ನ ಕಡೆಯ ಭಾಷಣವು ಮುಗಿಯಿತು (ಕಡೆಗೊಮ್ಮೆ ಗಾಂಧೀಟೊಪ್ಪಿಗೆಯನ್ನು ಜಗ್ಗಿ ಕೂಡುವನು.)

**ಕಾಂಜೀವರಂ ಕಸ್ತೂರಿರಂಗನ್**

(ಘೋಷಿಸುವ ಧನಿಯಲ್ಲಿ) ಬೋಲೋ ದೇ। ಭ। ತಿಂಮು ಮಹಾರಾಜ್ಕೀ

(ಎಲ್ಲರೂ ಜೈ ಎನ್ನುವರು)

**ವೀರಯ್ಯ ಬೆತ್ತದ್**

ಬೋಲೋ ಮುಖ್ಯೋಪಾಧ್ಯಾಯ ಕಾಂಜೀವರಂ ಕಸ್ತೂರಿರಂಗನ್ಕೀ

(ಎಲ್ಲರೂ ಜೈ ಎನ್ನುವರು.)

**ಕಾಂಜೀವರಂ ಕಸ್ತೂರಿರಂಗನ್**

ಬೋಲೋ ಅಹಿಂಸಾಮೂರ್ತಿ ವೀರಯ್ಯ ಬೆತ್ತದ್ಕೀ............

(ಎಲ್ಲರೂ ಜೈ ಎನ್ನುವರು. ಅವರೊಟ್ಟಿಗೆ ವೀರಯ್ಯನವರೂ ಜೈ ಎನ್ನುವರು)

**ಕೆಂಚ**

(ಆತ್ಮ) ಇದನ್ನ ನೋಡಾಕೆ ನಿಂತು ಶಂತಿಕಳಕೊಂಡು ನಾನು ಹುಚ್ಚ ಮುಂಗ ಆದೆನಲ್ರೀ! ಒಳ್ಳೆ ದೇ। ಭರು ಬಂದ್ರು ಇವರು, ದೇಸಾ ಉದ್ಧಾರ ಮಾಡೋರು. ಆ ಬುದ್ಧಿ ಇಲ್ಲದ ದೇವರೂ ಹತ್ತು ಅವತಾರ ಮಾಡಿ ಹುಚ್ಚ ಆಗಿ ಸುಮ್ಕ ಕುಂತ. ಇದು ಬಂತು ನೋಡ್ರಿ ಹನ್ನೊಂದನೆಯ ಅವತಾರ! (ಪ್ರಕಾಶ) ಬೊಲೋ ಹನ್ನೊಂದನೆ ಅವತಾರ್ಕು........(ಎಲ್ಲರೂ ಜೈ ಎನ್ನುವರು ದೇ। ಭ। ತಿಂಮುನೂ ಜೈ ಎಂದು ಕೂಗುವನು)

---

# ತಿಂಮ ಸತ್ತಾಗ

## ಅಳುವ ಪಾತ್ರಗಳು

೧. **ಸಾವಿತ್ರಿ**:— ತಿಂಮನ ಸಾಧ್ವಿ; ಅಗ್ನಿ ಸಾಕ್ಷಿಯಾಗಿ ಕೈಹಿಡಿದ ಅರ್ಧಾಂಗಿ.

೨. **ಗೋಪಿ**:— ತಿಂಮನ ತಮ್ಮ; ಟ್ಯೂಟೋರಿಯಲ್ ಕಾಲೇಜಿನ ಕಾಯಂ ವಿದ್ಯಾರ್ಥಿ.

೩. **ಗಂಡವ್ವ**:— ತಿಂಮನ ತಾಯಿ.

೪. **ಹೆಂಣವ್ವ**:— ಸಾವಿತ್ರಿಯನ್ನು ಸಾಕಿದ ದೊಡ್ಡಮ್ಮ.

೫. **ಪದ್ದು** :— ತಿಂಮ ಸಾವಿತ್ರಿಯವರ ಪಾಪದ ಫಲ; ಮದುವೆ ವಯಸ್ಸು ದಾಟಿದ ಅವಿವಾಹಿತ ಮಗಳು.

೬. **ದೊಡ್ಡಮಗು**:— ತಿಂಮ ಸಾವಿತ್ರಿಯವರದು, ಐದುವರ್ಷ ವಯಸ್ಸು.

೭. **ಚಿಕ್ಕಮಗು**:— ಅವರದೇ, ನಾಲ್ಕುವರ್ಷ ಮೂರು ತಿಂಗಳು ವಯಸ್ಸು.

೮. **ಆಚಾರ್ಯರು**: — ಮನೆ ದೇವರಿಗಿಷ್ಟು ನೀರು ಕಾಣಿಸುವ ವಿಪ್ರವರ್ಯ.

೯. **ತಾರವ್ವ**:— ಪಕ್ಕೆಮನೆಯ ವಿಧವೆ.

೧೦. **ಬೀಚಿ**:— ತಿಂಮ ಸಾಹಿತ್ಯಮಾಲಾ ಹಮಾಲ.

## ಸಾಯುವ ಪಾತ್ರ

೧೧. **ತಿಂಮ**:— ತಿಂಮ

( ಮನೆಯ ಮುಂದಿನ ವಳಾಂಗಣ. ಕೆಟ್ಟ ನಕ್ಷತ್ರ, ಮನೆ ಬಿಡಬೇಕಾಗುತ್ತದೆಂದು ಮರಣೋನ್ಮುಖನಾದ ತಿಂಮನನ್ನು ಹೊರತಂದು ಮಾಡಿಕೆಯಂತೆ ಚಾಪೆಯ ಮೇಲೆ 'ಭೂಶಯನ'ಕ್ಕೆ ಹಾಕಿದ್ದಾರೆ. ತಿಂಮನ ಬಾಯಿ ಬಿದ್ದಿದೆ. ನಿಸ್ತೇಜವಾದ ಕಣ್ಣುಗಳಿಂದ ಸುತ್ತಲೂ ಒಂದು ಬಾರಿ ನೋಡುತ್ತಾನೆ. ಪಪ್ಪೂದ್ದನ ಮುಖನೋಡಿ ಎರಡೂ ಕೈಗಳಿಂದ ಕಣ್ಣುಮುಚ್ಚಿಗೊಳ್ಳುತ್ತಾನೆ. ತಲೆಯಬದಿ ತಿಂಮನ ಹೆಂಡತಿ— ಸಾಕ್ಷಾತ್ ಸಾವಿತ್ರಿ ಕಾತರಳಾಗಿ ಕುಳಿತಿದ್ದಾಳೆ. ಹೆಣವ್ವ ಅವಳ ಬದಿಯಲ್ಲಿಯೇ ಕುಳಿತು ಸಂತೈಸುತ್ತಿದ್ದಾಳೆ. ಸೋರ್ಡ್ ಕಟ್ ಮೀಸೆ, ಬುಶ್‌ಕೋಟ್ ಧರಿಸಿದ ತಮ್ಮ ಗೋಪಿ-ತಲೆಕ್ರಾಪನ್ನು ಕೈಯಿಂದ ಕೆಡಿಸಿಕೊಂಡು ತಿಂಮನ ಕಾಲಬದಿ ಇದ್ದ ಸ್ಟೂಲಿನ ಮೇಲೆ ಸಪ್ಪೆಮುಖಹಾಕಿ ಕುಳಿತಿದ್ದಾನೆ. ಬಾಗಿಲಲ್ಲಿ ಕುಳಿತ ಮಕ್ಕಳು ಹಾರುವ ಹುಳುಗಳನ್ನು ಹಿಡಿದು ರೆಕ್ಕೆ ಕಿತ್ತುತ್ತಿವೆ. ಜಯ ವಿಜಯರಂತೆ ಆ ಈ ಬದಿಗೆ ನಿಂತ ಆಚಾರ್ಯರು ಮತ್ತು ತಾರವ್ವ ತಿಂಮನ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದಾರೆ. ತೊಡೆಯ ಮೇಲೆ ಸಾಯುತ್ತಿರುವ ಮಗನ ತಲೆಯನ್ನಿಕ್ಕಿಕೊಂಡು ಗಲ್ಲಕ್ಕೆ ಕೈ ಇಕ್ಕಿ ಗಂಡವ್ವ ಕುಳಿತಿದ್ದಾಳೆ. ಬಾಗಿಲು ತೆರೆದಿದೆ. ಎದುರು ಕಟ್ಟೆಗೆ ಆರೆಂಟು ಜನರು ಕಾದು ಕುಳಿತು 'ಮಳೆ ಬರುವಂತಿದೆ, ಬೇಗ ಆದರೆ ಮೇಲು' ಎಂದು ತಂತಮ್ಮಲ್ಲಿಯೇ ಪೇಚಾಡಿಗೊಳ್ಳುತ್ತಿದ್ದಾರೆ. ತಿಂಮನ ಮುಖದ ಮೇಲೆ ಸಾಯುವ ವೇದನೆ ಒಡೆದು ಕಾಣುತ್ತಿದೆ. ಶ್ವಾಸೋಚ್ಛ್ವಾಸವು ಕ್ರಮೇಣ ಕಡಿಮೆಯಾಗಿ ಗಂಟಲಲ್ಲಿ ಗೊರ್ ಗೊರ್ರೆನ್ನುವದು. ಎರಡೂ ಕೈಜೋಡಿಸಿ ಮೇಲಕ್ಕೆ ಮುಗಿಯುತ್ತಾನೆ. ಪ್ರಾಣವು ಹೋಯಿತು. ಎಲ್ಲರೂ 'ಅಯ್ಯೋ' ಎಂದು ಚೀರಿ ದೊಡ್ಡ ದನಿಯಿಂದ ಅಳಲು ಆರಂಭಿಸುತ್ತಾರೆ. ಗಂಡವ್ವ ಮೆಲ್ಲನೆ ಕಾಲು ತೆಗೆದು ಗೋಡೆಗೆ ಸರಿಯುತ್ತಾಳೆ. ಗೋಪಿಯು ಕೈ ಮುಟ್ಟಿಸಿ ಆಚಾರ್ಯರು ತಿಂಮನ ಬಾಯಲ್ಲಿ ಅಕ್ಕಿ ಕಾಳು ಹಾಕಿ ಹೆಣವ ಮುಖ ಮುಚ್ಚಿಬಿಡುತ್ತಾರೆ. ಸತ್ತವನ ಮನೆಯಲ್ಲಿ ಸುರು ಇದ್ದವರ ಗೋಳು.)

**ಸಾವಿತ್ರಿ**

ಕಣ್ಣು ಮುಚ್ಚಿದಿರಾ ನೀವೂ....ನನ್ನ ದೇವ್ರೆ ಇದ್ದಾಗ ಇದ್ರೀ.... ನೀವಃ ಇಲ್ಲದ ಮ್ಯಾಲೆ ನನ್ನ ಬಾಳು ನಾಯೀ ಬಾಳೂ ...ಅನ್ಯಾಯ ಮಾಡಿದ ದೇವ್ರೂ.... ಆ ದೇವ್ರ ಅಂಬೋನು ಅನ್ಯಾಯ ಮಾಡಿಬಿಟ್ಟಾ....ದೊಡ್ಡಮ್ಮಾ ದೊಡ್ಡಮ್ಮಾ....ನಾನೂ ನಿನ್ನ ಹಾಗೆ ಆದೇ.... ಈ ಮಾರಿ ಇನ್ನ ಹ್ಯಾಗೆ ಮಂದೀಗೆ ತೋರಿಸಲೀ.... ಕುಂಕುಮ ಒಯಿದುಬಿಟ್ರೂ.... ಸ್ವಾಮೀ ನಮ್ಮಪ್ಪ ದೇವ್ರೇ....

ನನ್ನ ಕುಂಕಮದ ಮ್ಯಾಲೆ ಯಾಕೆ ನಿನ್ನ ಕಣ್ಣು ಬಿತ್ತು....ನಾನು ಬ್ಯಾಡ ಅದೆನೇನಪ್ಪಾ ದೇವ್ರೇ, ನಿನಗೇ....ಮುತ್ತೈದಿ ಸಾವು ಕೊಡು ಮಧ್ಯಾಹ್ನ ಮರಣ ಕೊಡೂ ಅಂತಾ ದಿನಾಲೂ ಅಂತಿದ್ದೆ ನಾನೂ....ಗುಡ್ಡದಂಥಾ ಸಂಸಾರ ಹೊತ್ತಿದ್ರು ಅವರೂ....ಅವರನ್ನ ಒಯಿದು ಇಷ್ಟು ಮಂದೀ ಬಾಯಾಗೆ ಮಣ್ಣು ಹಾಕಿಬಿಟ್ಟೆ....ಅವರನ್ನೊಂದು ಬದುಕಿಸಬಾರದಿತ್ತೇ. ನಾನು ಸಾಯಲಿಕ್ಕೆ ಸದಾ ಸಿದ್ಧಳಿದ್ದೀನಿ....ಮಕ್ಕಳ ಮಾರಿ ನೋಡಿ ಆದರೂ ಅವರನ್ನ ಬಿಡಬಾರದಿತ್ತೇ ನಪ್ಪಾ....ಕಂಕಣದ ಕೈ ಮ್ಯಾಲೆ ಮಾಡಿಕೊಂಡು ನಕ್ಕೋತ ಸಾಯಿತಿದ್ದೆ ನಾನೂ....ಅಯ್ಯೋ ದೇವ್ರೇ (ಗೋಡೆಗೆ ತಲೆ ಹಾಯಿಸಲು ಹೋಗುವಳು. ಗೋಪಿ ಎದ್ದು ಬಂದು ಅಡ್ಡ ಕೈ ಹಿಡಿದು ತಡೆಯುವನು.)

**ಗೋಪಿ**

(ಅಸ್ತವ್ಯಸ್ತವಾಗಿ ಮುಖದ ಮೇಲೆ ಬಿದ್ದಿದ್ದ ಕ್ರಾಪಿನ ಕೂದಲನ್ನು ಎಡ ಮುಷ್ಟಿಯಲ್ಲಿ ಕಿತ್ತುವಂತೆ ಹಿಡಿದು) ಎಲ್ಲಿ ಸುಡುಗಾಡಾಗೆ ಇದ್ದಾನೆ ದೇವ್ರು....

(ದುಃಖಾವೇಶಗಳಿಂದ) ಓ ಗಾಡ್!ದೇವ್ರಿಗೆ ಕಣ್ಣಿಲ್ಲಣ್ಣಾ....ದೇವ್ರಾಣಿ ಕಣ್ಣಿಲ್ಲ ಅವನಿಗೆ....ಕಣ್ಣಿಲ್ಲಾ........ಕಣ್ಣಿದ್ರೆ ಎಲ್ಲಾರನ್ನೂ ಬಿಟ್ಟು ನಿನ್ನೇ ಯಾಕೆ ಒಯಿತಿದ್ದ? ಕಾಲೇಜ ಕಲಿಯೋ ತಂಮ್ಮಾ, ಮದುವಿಗಾದ ಮಗಳೂ, ಒಂಬತ್ತು ತಿಂಗಳಿಗೊಂದು ಹಡೆಯುವ ಹೆಂಡತಿ, ಚಿಕ್ಕಪುಟ್ಟ ಮಕ್ಕಳೂ, ಓಳ್ಡ ಮುದರ‍್ರೂ ಇದ್ದ ನಿನ್ನ, ಇಷ್ಟು ಜನರನ್ನ ಸಾಕಿದ ನಿನ್ನ ಯಾಕೆ ಒಯಿತಿದ್ದ? ದೇವ್ರೂ ನಿಜವಾಗಿ ಬ್ಲೈಂಡು....ಅಣ್ಣಾ, ಈ ಭೂಮಿಮ್ಯಾಲೆ ಇನ್ನ ನಂದೇನು ಕೆಲಸದೆ? ದೇವರೇ, ನಮ್ಮಣ್ಣನ ಬದಲು ಇನ್ಯಾರನ್ನಾದರೂ ಒಯ್ಯಬಾರ ದಿತ್ತೇ....ಮನಿತುಂಬಾ ಅವಲ್ಲ ಕೂಳಿಗೆ ಮೂಲಾಗಿ ಈ ಓಳ್ಡಹ್ಯಾಗ್ಸ್ನ. ನನ್ನೇ ಯಾಕೆ ಒಯ್ಯಲಿಲ್ಲಪಾ ದೇವ್ರೆ? ನಾನು ಅನ್‌ಮ್ಯಾರೀಡು. ನನಗೇನು ಹೆಂಡ್ರೇ, ಮಕ್ಕಳೇ ಅಳ್ಳಿಕ್ಕೆ? ಸಾಯಲಿಕ್ಕೆ ನಾನು ಈಗೂ ರೆಡಿ ಇದ್ದೀನಿ. ನಮ್ಮ ವಂಶ ಬೆಳಿಸಲಿಕ್ಕೆ ನೀನೊಬ್ಬಾತಿದ್ದಿ ಹೇಗಾದರೂ. ನನ್ನ ಒಯಿದು ನಮಣ್ಣನ್ನ ಬಿಡಬಾರದೇನಪಾ, ಓ ಮರ್ಸಿಫುಲ್ ಗಾಡ್! (ಮುಷ್ಟಿಯಿಂದ ಕೂದಲು ಕಿತ್ತುವನು. ಪದ್ದು ಗಟ್ಟಿಯಾಗಿ ಕೈ ಹಿಡಿದು ಮುಷ್ಟಿಯನ್ನು ಬಿಡಿಸು ವಳು.)

## ಪದ್ದು

ಅಪ್ಪಾ, ಓ ಅಪ್ಪಾ! ನಮ್ಮ ಗತಿ ಏನು ಮಾಡಿ ಬಿಟ್ಟೀ ? ನಾವೆಲ್ಲಾರೂ ಇದ್ದೂ ನೀನೊಬ್ಬಾತ ಹೋದರೆ ಏನದೆ? ನಾವೆಲ್ಲಾರೂ ಸತ್ತ ಹಾಗಾತು. ನನ್ನ ದೇವ್ರು ಒಯಿದಿದ್ರೆ ಸೆಟ್ಟಗಿತ್ತು....ಹುಟ್ಟಿದ್ದ ಎರಡು ಅಂದುಕೊಂಡು ಸುಖವಾಗಿ ಇರ್‍ತಿದ್ರಿ. ನಿನs ಇಲ್ಲದಿದ್ರೆ ಏನದೆ ? ನನ್ನಿಂದ ಏನಾದೀತು ? ನನಗೆ ಸಾವು ತರಲಿಲ್ಲ ನೋಡವ್ವಾ ದೇವ್ರೂ........ಮುಖ್ಯ ನಾನು ಹೋಗಬೇಕಾಗಿತ್ತೂ....ಅಪ್ಪನ ಬದಲು ನನಗೆ ಬರಲಿಲ್ಲ ಸಾವ್ರೂ........ಅಯ್ಯೋ, ಅಪ್ಪಾ (ಬದಿಗಿದ್ದ ಹೆಂಣವ್ವನ ಭುಜಕ್ಕೆ ತಲೆ ಇಡುವಳು)

## ಹೆಂಣವ್ವ

ನಿನಗ್ಯಾಕೆ ಬರಬೇಕಿತ್ತವ್ವಾ ಸಾವೂ....ಚಿಕ್ಕಪುಟ್ಟವರು ನೀವೂ.... ಹಾಗನಬಾರದವ್ವಾ ಪದ್ದೂ, ಒಳತು ಅನ್ನೂ... ನಡವಯಸ್ಸಿನಾಗೆ ಹೋಗಿ ಬಿಟ್ಟರೂ.... ಮುದಿ ಹದ್ದು ಕೂತ ಹಾಗೆ ಹಾಗೇ ಕೂತೀನಿ ನಾನು. ಸಂತೋಷದಿಂದ ಸಾಯುತಿದ್ದೆನಲ್ಲಪ್ಪಾ ದೇವ್ರೆ....ನಾನು ಇದ್ದು ಕಡಿಯೋದೇನದೆ ಈ ಭೂಮಿಮ್ಯಾಲೆ....ಭೂಮೀಗೆ ಭಾರ ಆಗಿ ಕೂಳಿಗೆ ದಂಡ ಆಗಿ ನನ್ಯಾಕೆ ಇಟ್ಟೀದಿ ಇನ್ನೂ. ಈ ಸಾವು ಕೇಡು ನೋಡಲಿಕ್ಕೆ ಬದುಕಿರಬೇಕೇನಪ್ಪಾ ನಾನೂ....ನನಗೇನು ಆಶಾ ಉಳದದೆ ಅಂತ ನಾನಿನ್ನು ಬದುಕಿರಲಿ ಸ್ವಾಮೀ ? ನನ್ನ ಅಳಿಯನ್ನ ಉಳಿಸಿ ನನ್ನ ಕಂಣು ಮುಚ್ಚಬಾರದಿತ್ತೇನಪ್ಪಾ ಮುರಹರೀ.... ಒಂದಲ್ಲಾ, ಎರಡಲ್ಲಾ, ಮೂರುಬಾರಿ ತಿರುಪತಿ ತೋರಿಸಿದ್ರು ಮಹರಾಯ ಅಳಿಯಾ....ಅತ್ತೇರ, ನೀವು ಗುಡ್ಡ ಹತ್ತಲಾರ್‍ರಿ, ನಿಮಗೆ ಕೆಮ್ಮು ದಮ್ಮು ಬಂದೀತು ಅಂತ ಆದರ ಮಾಡಿ, ಬ್ಯಾಡ ಅಂದರೂ ಕೇಳದೆ ಕೈ ಹಿಡಿದು ಮುಟ್ಟಿ ಪುಟ್ಯಾಗೆ ಕೂಡಿಸಿ ಕಳಿಸಿದಿರಿ. ನಿಮ್ಮಮ್ಮನ ಸರಿಸರಿ ತೀರ್ಥಯಾತ್ರಾ ಮಾಡಿಸಿದಿರಿ... ಹೆಂಣುಮಕ್ಕಳ ಡಬ್ಯಾಗೇ ಕೂಡಿಸೇ ಕಾಶೀರಾಮೇಶ್ವರಕ್ಕೆ ಕರಕೊಂಡು ಹೋದಿರಿ.....ಎರಡುಬ್ಯಾರೆ ಉಡುಪಿ ಶ್ರೀ ಕೃಷ್ಣನ್ನ ಬಿಡಿದಿವಸದಾಗೆ ತೋರಿಸಿದಿರಿ....ನಂದು ಇನ್ನೇನು ಆಗೋದದೆ ಅಂತ ನನ್ನ ಇಟ್ಟು ನನ್ನ ಅಳಿಯನ್ನ ಒಯ್ದೀಯಪಾ ದೇವ್ರೆ?....ಮಗಳೂ ಅಳಿಯನ ಎದುರಿಗೆ ಮೊಮ್ಮಕ್ಕಳ ಎದುರಿಗೆ ಸಂತೋಷದಿಂದ ಸಾಯಿತಿದ್ದೆ....ನನ್ನ ಕಂಣು ಮುಚ್ಚಿಬಿಡಪಾ ಸ್ವಾಮೀ ! ನನ್ನ ಮಗಳ್ನೂ ನನ್ನ ಹಾಗೆ ಮಾಡಿ ಕೂಡಿಸಬ್ಯಾಡಾ....ಹದ್ದಿ

ನಂತಿರೋ ನನ್ನ ಆಯುಸ್ಸು ನನ್ನ ಅಳಿಯಗಾದರೂ ಹಾಕಬಾರದೇ....ನಾನು ಇನ್ನ ಇರಲಾರೆ ಆಚಾರ್ರೇ....ಯಾವುದಾದರೂ ಸೀನೀರಿನ ಭಾವ್ಯಾಗೆ ಬಿದ್ದು ನಾಯ್ತೀನಿ ನಾನೂ....ದೇವ್ರೇ, ಈ ನಿರ್ಭಾಗ್ಯಳನ್ನ ಮರತೇನಪಾ....

## ಆಚಾರ್ಯರು

ಇನ್ನೆಲ್ಲಿ ಇದ್ದಾನಮ್ಮಾ ದೇವ್ರು....ದೇವ್ರು ಎಲ್ಲಿ ಸುಡುಗಾಡಾಗೆ ಇದ್ದಾನೆ? ದೇವ್ರು ಇದ್ದಿದ್ರೆ ಹೀಗೆಲ್ಲ ಯಾಕೆ ಆಗತಿತ್ತೂ....ಹೋಯಿತಮ್ಮಾ ದೇವ್ರ ಸತ್ಯಾ....ಆ ಕಾಲ ಹಿಂದಾತು. ದೇವ್ರಿಗೆ ಅನಿಷ್ಟ ಬಡಿಸಿಬಿಟ್ರು ಈ ಕಾಂಗ್ರೆಸ್ಸು ಹೊಲೇರು....ಗುಡ್ಯಾಗೆ ಮಾದಿಗರನ್ನ ಹೊಗಿಸಿ ದೇವ್ರಿಗೇ ಹೊಗಿ ಇಟ್ರು.... ಇಂಥಾ ಕೆಟ್ಟ ಕಾಲ ಬಂತೂ....ಸ್ವಾಮೀ, ಶ್ರೀಮನ್ನಾರಯಣಾ ! ನಿನಗೆಲ್ಲೀ ಉಳಗಾಲಪ್ಪಾ ಇನ್ನಾ....ಗುಡಿಗೆ ಸರಕಾರ ಗಂಟು ಬಿತ್ತು, ನಿನ್ನ ಮಾದಿಗರು ಮುಟ್ಟಿಬಿಟ್ರು. ಈ ಕಲಿಯುಗದಾಗ ನಿನ ಸತ್ಯ ಇನ್ನೇನು ನಡದೀತು ? ಅದಕ್ಕs ಮತ್ತೆ, ಮಳಿ ಹೋತು ಬೆಳಿ ಹೋತು, ಅಳತಿ ಕೂಳು ಬಂದಮ್ಯಾಲೆ ನಾನು ಯಾಕಿರಬೇಕು ಹೇಳು. ನಮ್ಮಂಥಾ ಗ್ರಸ್ಥಗಳು ಇರಲಿಕ್ಕೇ ಚಿಕ್ಕಪುಟ್ಟವರು ಸಾಯ್ತಾರೆ. ಕಾಂಗ್ರೆಸ್ಸೂ ಕಾಂಗ್ರೆಸ್ಸೂ ಅಂದು ಜಾತಿ ಸಂಕರ ಮಾಡಿಬಿಟ್ರು. ಆ ಹೊಲೇರನ್ನ ಈ ಮಾದಿಗರು ಅಪ್ಪಿಗೊಂಡದ್ದು ನೋಡಲಿಕ್ಕೆ ನನ್ನ ಯಾಕೆ ಇಟ್ಟೆಪಾ ಮುಕುಂದಾ ?....ನಿನ್ನ ಮಾತು ಸುಳ್ಳು ಆಗೋ ಕಾಲ ಬಂತೇನಪಾ ಮುರಹರೀ....ನಿನ್ನ ಗೀತಾ ವಾಕ್ಯಾನೆ ಸುಳ್ಳು ಆದಮ್ಯಾಲೆ ಇನ್ನೇನದೆ?.... ಸಂಭಾವಾಮಿ ಯುಗೇ ಯುಗೇ ಅಂತ ನನಗೆ ವಚನ ಕೊಟ್ಟಿದ್ದೆಲ್ಲಪಾ.... ಈಗ ಯಾಕೆ ಸುಮ್ಮನೆ ಕೂತು ಬಿಟ್ಟೆಪಾ....ನಿನಗೆ ಮೈಲಿಗೆ ಮಾಡೋ ಬಿಳಿ ಟೊಪ್ಪಿಗಿ ದೈತ್ಯರ ಮ್ಯಾಲೆ ನಿನ್ನ ಚಕ್ರ ಬಿಡು....ಬಿಡು ಏನು ನೋಡ್ತೀದಿ.... ಕೂಸಿದ್ದಾಗ ಪೂತಣಿನ್ನ ಕೊಂದಿ, ಕಂಸ ವಧ ಮಾಡಿದಿ, ಶಿಶುಪಾಲ ದಂತ ವಕ್ರನ್ನ ಸಂಹಾರ ಮಾಡಿದಿ....ಕೋಟಿ ದೈತ್ಯರನ್ನ ಕಂಡ ಕೊಂದ ನಿನಗೆ ಈ ಹೊಲೇರು ಸಾಟಿ ಏನಪ್ಪಾ ?....ಇಂಥವರನ್ನೆಲ್ಲಾ ಬಿಟ್ಟು ಈ ಸದ್ಗೃಹಸ್ಥನ್ನ ಯಾಕೆ ಒಯಿದೆಪಾ....ಭಾಳಾ ಯೋಗ್ಯ ಮನುಷ್ಯ ಇದ್ದಾ....ಇಲ್ಲದ ಹುಚ್ಚು ಹುಚ್ಚಿಗೆ ಹೋದ ಪ್ರಾಣಿ ಅಲ್ಲ, ಒಂದು ದಿನ ಆದರೂ ಕಾಂಗ್ರೆಸ್ಸು ಅನ್ನಲಿಲ್ಲ, ಹೊಲೇರನ್ನ ತಬ್ಬಿಕೊಳ್ಳಲಿಲ್ಲ. ತಾನೇನೋ ತನ್ನ ನೌಕರೀನೋ ಅಂತ ಇದ್ದ.... ನೋಡಿ ನೋಡಿ ಇಂಥಾತನ್ನ ಒಯಿದೆಲ್ಲಪಾ ? ಆ ಮಹರಾಯಳು ಹೋದಾಗೆ

ನಾನೂನು ಹೋದೇನೂ ಅಂದೆ. ಹದಿಮೂರು ವರ್ಷ ಜೀವ ಹಿಡಿದೀನಿ. ಈತನ ಬದಲು ನನ್ನ ಕರಸಿಗೋ ಬಾರದಿತ್ತೇ, ಆನಂದದಿಂದ ಬರ್ತಿದ್ದೆನಲ್ಲಪಾ ಶ್ರೀ ಹರೀ ( ಶಂಖವಾದ್ಯ ಮಾಡುವರು. )

## ತಾರವ್ವ

( ಸಂತೈಸುವ ದನಿಯಲ್ಲಿ ) ಆಚಾರ್ರೀ, ನಿಮಗೇನು ಹುಚ್ಚುಗಿಚ್ಚೇ ಹಿಡಿತೊ ಏನು ಮಣ್ಣು ? ಅಳಗಿಳಬಾರದ್ರೆಪಾ ನಿಮ್ಮಂಥಾವ್ರು. ನನ್ನಂಥಾ ಅಯೋಗ್ರು ಹೀಗೆಲ್ಲ ಅಳಗಿಳಬೇಕು. ಇಚಾರ ಗಿಚಾರ ಎಲ್ಲಾನೂ ತಪ್ಪಿದಿರ ಲ್ರೆಪಾ ನೀವು ? ಪುರಾಣ ಗಿರಾಣ ಓದಿದ ಸದ್ಬಿದ್ವಾಂಸ್ರುಮುಣ್ರು, ನೀವೇ ಅಳ ಗಿಳೋದು ಮಾಡಿದರ ಹ್ಯಾಗಾದೀತು (ಉಕ್ಕಿಬರುವ ಅಳುವನ್ನು ತಡೆಯಲಾರದೆ) ನನಗೆ ತರಲಿಲ್ಲ ದೇವ್ರೂ, ಸಾವುಗೀವು ಆಚಾರ್ರೀ, ನಮ್ಮ ಯಜಮಾನ್ರೂ ಹೋಗಿ ಹದಿಮೂರು ವರ್ಷ ಆಗ್ತಾಬಂತೂ....ನಿಮ್ಮ ಹೆಂಡತಿ ಹೋದ ವರ್ಷಾನೇ ನನ್ನ ಗಂಡನೂ ತೀರಿಕೊಂಡ್ರು ಆಚಾರ್ರೀ....ನನಗೇನಿತ್ತೂ ಚ್ಯಾನೇ ಮ್ಯಾನೇ ಹಿಂದೇ ಮುಂದೇ ಅಳೋವ್ರು ಕರೋವೇ ಮಂದಿ ಎದುರಿಗೆ ಹೋಗಿ ಬೈಸಿಕೊಳ್ಳಿಕ್ಕೆ ನನ್ಯಾಕೆ ಇಟ್ಟಿದ್ದಾನು ಮಹರಾಯ ಅಂತೀನಿ....ಮುತ್ತಿನಂಥಾ ಹುಡುಗಿ ಸಂಸಾರ ಹಾಳುಬಡದು ಈ ಚಿಕ್ಕಪುಟ್ಟವರನ್ನ ಒಯ್ಯೋ ಬದಲು ನನ್ನೆ ಒಯ್ಯಬಾರದಿತ್ತೇನಪಾ ರಾಮಚಂದ್ರಾ....ಮಧ್ಯಾನ್ನ ಮರಣಾ ಕೊಡು ಅಂತ ಈ ಹದಿಮೂರು ವರ್ಷದಿಂದ ಕೇಳ್ತಿದ್ದೆನಲ್ಲಪಾ ? ಚಿಕ್ಕಪುಟ್ಟವರನ್ನ ಕಳಿಸಿಗೋತ ಹೀಗೇ ಇರ್ಲೀನಪಾ ಕಡಿತನಕಾ ? ಈ ಹುಡಗನ್ನ ಇಟ್ಟು ನನ್ನೇ ಸಾಗಿಸಿದ್ರೆ ಹಬ್ಬ ಮಾಡ್ತಿದ್ರು ಹುಡುಗರೂ....ನಾನು ಹೋದೇನಂದೆ....ಇಷ್ಟು ಸಾರೆ ನನಗೆ ಅಸ್ತಮ ಉಬ್ಬಸರೋಗ ಬಂದಿತ್ತೂ, ಒಂದು ಸಾರೆ ಆದರೂ ಸಾಯಲಿಲ್ಲ ನಾನೂ....ಸತ್ತೇನು ಸತ್ತೇನು ಅಂತ ಅತ್ತು ಅತ್ತು ಸತ್ತೇ.... ಕಡಿಗೂ ಸತ್ತು ಸತ್ತು ಬದುಕಿದೆ. ಏನ್ರೆವ್ವಾ, ನೀವೂನು ಹಾಗೇ ಕೂತು ಬಿಟ್ರೀ ( ಗಂಡವ್ವನನ್ನು ಕುರಿತು ) ಖಬ್ಬಿನಂಥಾ ಮಗನ್ನ ಕಳಕೊಂಡು ಕಲ್ಲು ಕೂತ್ಹಾಗೆ ಕೂತುಬಿಟ್ರೀ....ನಿಮಗೆ ಅಳುಸಹ ಬರೋದಿಲ್ಲೇನು....ಮಗನ ಬದಲಿ ನಾ ಹೋಗ್ತೀನಿ ಅಂತ ಬಾಯಿಲೆ ಸಹ ಅನವಲ್ರೆಲ್ಲಾ....ಎಂಥಾ ಕಲ್ರೆವ್ವ ನಿಮ್ಮ ಮನಸ್ಸೂ....ಅನ್ರಿ, ಬಾಯಿಂದಾದರೂ ಅನ್ರಿ....

## ಸಾವಿತ್ರಿ

ಅವರು ಯಾಕೆ ಅಂದಾರವ್ವ....ಅವರ ಹಾಗೆ ನಾನೂ ಆಗಿಬಿಟ್ಟೆ... ಸ್ವಾಮೀ, ದೇವರೇ, ನನ್ನ ಒಯಿದು ಅವರಿಗೆ ಜೀವದಾನ ಕೊಡಪ್ಪಾ ನಮ್ಮಪ್ಪಾ.

(ಸತ್ತು ಬಿದ್ದಿರುವ ತಿಂಮ ಕೊಂಚ ಕೊಂಚ ಉಸಿರಾಡುತ್ತಿರುವಂತೆ ಭಾಸವಾಗುವದು. ಶ್ವಾಸೋಚ್ಛ್ವಾಸದಿಂದ ಆಗುತ್ತಿದ್ದ ಮುಖದ ಮೇಲಿನ ಹೊದಿಕೆಯ ಏಳು ಬೀಳುಗಳು ಕ್ರಮೇಣ ಹೆಚ್ಚಾಗಿ ಕಾಣುವವು. ತಿಂಮನ ಶವದ ಕೈಕಾಲುಗಳು ಮೆಲ್ಲನೆ ಕದಲುವವು. ಕಣ್ಣು ಮುಚ್ಚಿ ಮೂಲೆಯಲ್ಲಿ ಕುಳಿತಿರುವ ಗಂಡಪ್ಪನ ಹೊರತು ಬೇರೆಲ್ಲರೂ ಭಯದಿಂದ ಕಂಪಿತರಾಗಿ ಬದುಕುತ್ತಿರುವ ಹೆಣವನ್ನು ನೋಡಿ ಹಿಂದೆ ಸರಿಯುವರು. ಸಾವಿತ್ರಿ ಚಟ್ಟನೆ ಚೀರಿ ಹೆಂಣವ್ವನ ಸೆರಗಿನಿಂದ ಕಣ್ಣು ಮುಚ್ಚಿಕೊಳ್ಳುವಳು. ತಿಂಮ ನಿದ್ರೆಯಿಂದೆದ್ದಂತೆ ಎದ್ದು ಕುಳಿತು, ಮೈ ಮುರಿದು 'ಥೂ! ಇದೇನು ಬಾಯಾಗ? ಅಡಿಕೆ ತಿನ್ತಾ ಹಾಗೇ ಮಲಗಿಬಿಟ್ಟೇನಿ' ಎಂದು ಪಟಗುಟ್ಟಿ 'ಥೂ' ಎಂದು ಕುಳಿತಲ್ಲಿಯೇ ಉಗುಳುವನು.)

## ತಿಂಮ

ಅಯ್ಯೋ! ಅಕ್ಕಿ! ಹೀಗ್ಯಾಕೆ ಕೂತೀರಿ ಎಲ್ಲಾರೂ ಸತ್ತವರ ಸುತ್ತ ಕೂತ್ಹಾಗೆ.ಎಲ್ಲಿದ್ದೀನಿ ನಾನೂ, ಓಹೋ! ಈಗ ನೆನಪು ಆಗ್ತದೆ.ಸತ್ತು ಹೋಗಿದ್ದೆ ನಾನು. ಹೆಂಡತಿ ಮಕ್ಕಳು ಬಂಧು ಬಳಗ ಅಳೋದು ಕೇಳಲಾರದೆ ದೇವರು ಕಳಿಸಿಬಿಟ್ಟ.

## ಸಾವಿತ್ರಿ

(ಆನಂದ ಭಾಷ್ಪಗಳನ್ನು ಸುರಿಸುತ್ತ) ಬದುಕಿ ಬಂದಿರಾ ನೀವೂ........ ಬದುಕಿದಿರಾ, ಸಾಕು. ಸತ್ತು ಪುನಃ ಹುಟ್ಟಿಧಾಗಾತು.ದೇವ್ರು ದೊಡ್ಡ ಮನಸು ಮಾಡಿದ. ದೊಡ್ಡವ್ವಾ, ದೇವ್ರು ಕಿವುಡನೇನವ್ವಾ, ನನ್ನ ಗೋಳು ಆತಗೆ ಮುಟ್ಟಿತು ನೋಡವ್ವಾ........

## ಹೆಂಣವ್ವ

ನಾನೇನು ಧಡ್ಡಿ ಅಲ್ಲವ್ವಾ ಸಾವಿತ್ರೀ; ನನಗೆ ಆಗಲೆ ಗೊತ್ತಿತ್ತು, ನಿನ್ನ ಏಗ್ಯತಾ. ನೀನು ಹುಟ್ಟಿದ ಕೂಡಲೆ ನಾನು ಹೇಳಿದ್ದೆ ಈ ಮಾತು. ತಮ್ಮ ಅಮ್ಮನ ಹೆಸರು ಇಡಲಿಲ್ಲ ಅಂತ ಸಿಟ್ಟಾಗಿ ಗುಗ್ಗರಿ ಸಹ ತಿನದೆ ಹೋದರು ನಿಮ್ಮ ಅಪ್ಪ. ನಿಮ ಅಮ್ಮ ಹೇಳಿದರೂ ನಾನು ಒಪ್ಪಲಿಲ್ಲ. ಬ್ಯಾಡ ತಾಯೀ

ಆ ಸಿನೇಮಾದ ಬಂಣಗಿತ್ತೇರ ಹೆಸರು ಅಂದೆ. ಒಂದೇ ಹಟ ಹಿಡಿದು ನಿನಗೆ ಸಾವಿತ್ರೀ ಅಂತ ಹೆಸರಿಟ್ಟೆನವ್ವಾ ನಾನು. ನನಗೆ ಆಗಲೆ ಗೊತ್ತಿತ್ತು, ನೀನು ಗಂಡನ್ನ ಬದುಕಿಸಿಗೊಂಡು ಬರೋ ವಡಸಾವಿತ್ರಿ ಆಗ್ತೀದಿ ಮುಂದೆ ಅಂತ. ಅವರು ಬದುಕಿ ಬರದಿದ್ರೆ ನಾನೇ ಖುದ್ದು ಸತ್ತು ಅವರನ್ನ ಬದುಕಿಸಿ ಬಿಡತಿದ್ದೆ.

### ಗೋಪಿ

(ರಾಮನನ್ನು ಕಂಡ ಭರತನಂತೆ ಹರ್ಷೋನ್ಮುಖನಾಗಿ) ಅಣ್ಣಾ, ನೀನು ಬದುಕಿ ಬಂದೇನಪಾ, ಥ್ಯಾಂಕ್ ಗಾಡ್ನೊ. ಸೋ ನನ್ನ ಪ್ರೇಯರ್ಸ್ ವರ್ ಹರ್ಡ್ನೊ. ನಾನು ಆಗಲೆ ರೆಡಿ ಆಗಿಬಿಟ್ಟಿದ್ದೆ ನಿನ್ನ ಬದಲಿ ಸಾಯಲಿಕ್ಕೆ.

### ಸದ್ದು

ನನಗೆ ಹೆದರಿಕೆ ಆಗಿಬಿಟ್ಟಿತ್ತಪ್ಪಾ. ಇನ್ಯಾಕೆ ನಾನು ಬದುಕಿರಬೇಕು ಅಂತ ಅನಿಸಿತ್ತಪ್ಪಾ ನನಗೆ.

### ಆಚಾರ್ಯರು

ಆತ ಎಂದಿಗಾದರೂ ಭಕ್ತಪರಾಧೀನನಲ್ಲೇನಪಾ! ಲಕ್ಷ್ಮೀಸಮೇತ ಶೇಷ ಶಯನನಾಗಿ ಮಲಗಿದ ವಿಷ್ಣು—ಸಾಕ್ಷಾತ್ ಪರಮಾತ್ಮನೆ ನನ್ನಂತಹ ಸದ್ಬ್ರಾಹ್ಮಣನ ಆರ್ತಧ್ವನಿ ಅಂದ್ರೆ ಸಾಮಾನ್ಯ ಏನಪಾ? ನಾನು—ಸ್ವತಃ ನಾನು ಮೂರು ಸರತಿ ಸುಧಾ ಮಂಗಳ ಮಾಡಿದ ನಾನು ಕರೆದರೆ ಆ ವೈಕುಂಠಪತಿ ಬರದೇ ಬಿಟ್ಟಾನ? ಭಕ್ತವತ್ಸಲ ಅಂಬೋ ಬಿರುದು ಆತಗೇ ಅದಲ್ಲ? ಈ ಕಾಂಗ್ರೆಸ ಚಂಡಾಲರು ಹಿರೇತನ ಮಾಡಿ ಯಾರಿಗೂ ಬಿರುದುಗಳು ಇರಬಾರದು ಅಂದ್ರು. ಮುರಹರೀ, ಅಂತೂ ಈ ಯೋಗ್ಯ ವಿಪ್ರ ಕರೆದರೆ ಗೌರವ ಕೊಟ್ಟು ಬಂದೆಪಾ, ಸಂತೋಷ. ಏಳಪಾ, ತಿಂಮಾ. ನನ್ನ ಪಾದಾ ಮುಟ್ಟಿ ನಮಸ್ಕಾರ ಮಾಡು. ನಾನು ಸತ್ತು ಆದರೂ ನಿನ್ನ ಬದುಕಿಸಿಗೊಂಡು ಬರತಿದ್ದೆ, ಆ ಕಾಳೀಮರ್ಧನಗೂ ಹೇಳಿ.

### ತಾರವ್ವ

ದೊಡ್ಡವರ ಮಾತು ಎಂದಿಗಾದರೂ ಸುಳ್ಳು ಆದೀತೇನ್ರೆ ಹುಡುಗೇರಾ? ಹಿರೇಮನಿಶಾಳ ಆಶೀರ್ವಾದದ ಫಲ ನೋಡು ಇದು. ಬೇಕಾದರೆ ನನ್ನ ಒಯಿದು ಈ ತಿಂಮನ್ನ ಬದುಕಿಸಿ ಕೊಡಪ್ಪಾ ದೇವ್ರೆ ಅಂತ ಮನಸಿನಾಗೇ

ಸಂಕಲ್ಪ ಮಾಡಿಕೊಂಡು ಬಿಟ್ಟೆ. ಯಜಮಾನ ಮನಿಶಾಳ ಮಾತು ಯಾಕೆ ತಾತ್ಸಾರ ಮಾಡ್ಯಾನು ಆ ದೇವ್ರು, ಆತೇನು ಸೊಸಿ ಮಾತು ಕೇಳಿ ಕುಣಿಯೋ ಮಂಗನಃ ? ಏಳಪಾ ತಿಂಮಪ್ಪಾ, ನಿನ್ನ ಜೀವಕ್ಕೆ ನನ್ನ ಜೀವ ಅಂತ ಕೊಡಬಿಟ್ಟಿದ್ದೆ ನಾನು ಆಗಲಿ. ನಮಸ್ಕಾರ ಮಾಡಪಾ. ಉದಂಡ ಆಯುಷ್ಯವಂತನಾಗು ಅಂತ ಹರಿಸಿ ಹೋಗ್ತೀನಿ ನಾನು, ಮೈ ತೊಳಕಳ್ಳಿಕ್ಕೆ, ಸುಡುಗಾಡು ಹೆಣ ಬ್ಯಾರಿ ನೋಡೀನಿ.

### ತಿಂಮ

( ದಿಗ್ಭ್ರಾಂತನಾಗಿ ಸುತ್ತಲು ನೋಡಿ ತಡವರಿಸುತ್ತ ) ಅಂತೂ ಯಾರ ಪುಣ್ಯದಿಂದಾರೆ ಆಗಲಿ....ಎಲ್ಲರೂ ಸೇರಿ ಬದುಕಿಸಿಗೊಂಡ್ರೆಲ್ಲ ನನ್ನ....ಅದಕ್ಕೇ ಅಂಬೋದು, ಬಂಧುಬಳಗ ಹಿರೇರೂ ಕಿರೇರೂ ಇರಬೇಕು ಅಂತ. (ಬಾಗಿಲಲ್ಲಿ ಆಡುತ್ತಿದ್ದ ತಿಂಮನ ಎರಡೂ ಮಕ್ಕಳೂ ಹತ್ತಿರ ಬರುವವು. ಮೈಯೊಡನೆ ಮುದ್ದಿಕ್ಕಿ ಅತ್ತಿತ್ತ ನೋಡಿ ) ಇದೇನು ! ಅಮ್ಮನ ಸುಳುವು ಇಲ್ಲಲ್ಲ ? ( ಅರೆಗಣ್ಣು ಮುಚ್ಚಿ ಕೈಮುಗಿದು ಮೂಲೆಯಲ್ಲಿ ಕುಳಿತ ಗಂಡವ್ವನನ್ನು ನೋಡಿ ನಿದ್ರೆಯಲ್ಲಿದ್ದವರನ್ನು ಎಬ್ಬಿಸುವಂತೆ ) ಅಮ್ಮಾ, ಏ ಅಮ್ಮಾ! ಕಣ್ಣು ತಗಿಯಮ್ಮಾ. ನಾನಮ್ಮಾ, ನಾನು ತಿಂಮ. ಬದುಕಿ ಬಂದೀನಿ ನೋಡಮ್ಮಾ .

### ಗಂಡವ್ವ

(ಕನಸಿನಲ್ಲಿ ಕಣ್ತೆರೆದವಳಂತೆ ತೆರೆದು ಮಕ್ಕಳು ಸೊಸೆ ಮೊಮ್ಮಕ್ಕಳು ಬೀಗಿತ್ತಿ ಎಲ್ಲರನ್ನೂ ಕಣ್ತುಂಬ ನೋಡಿ, ತಿಂಮನ ತಲೆಯ ಮೇಲೆ ಕೈಯಾಡಿ ) ಬಂದೇನಪಾ ತಿಂಮಾ (ಅಶ್ರುಗಳಿಂದ ಕಣ್ಣು ಮಸುಕಾಗುವದು.)

### ತಿಂಮ

ಅಳಬ್ಯಾಡಮ್ಮಾ ಇನ್ನ, ಆ ದಿನ ಹಿಂದಾದವು. ನನ್ನ ತುಂಬಿದ ಮನಿ ಕಣ್ತುಂಬ ನೋಡಿ ಹೊಟ್ಟಿತುಂಬ ನಗಮ್ಮ ಈಗ. ದೇವರು ಕೃಪಾ ಮಾಡಿದ. 'ನಿನ್ನ ಸಂಸಾರ ನಾನು ಯಾಕೆ ಹಾಳು ಮಾಡ್ಲೆಪಾ ತಿಂಮಾ, ಅಗತ್ಯ ಹೋಗು' ಅಂತ ಹೇಳಿ ವಾಪಸು ಕಳಿಸಿಬಿಟ್ಟ, ದಯಾಳು. 'ಸಂತೋಷದಿಂದ ಕಳುಸ್ತೀನಿ ಹೋಗಪಾ' ಅಂದನಮ್ಮಾ ದೇವರು. ನಾನು ಆತನ ಪಾದ ಮುಟ್ಟಿ ಸಣ್ಣ ಕೂಸಿನಂತೆ ಬಿಕ್ಕಿ ಬಿಕ್ಕಿ ಅತ್ತೆ. "ಛೇ, ಧಡ್ಡಾ ಹೀಗೆ ಯಾಕೆ ಅಳುತೀ, ನೀನು ಗಂಡಸು, ಮನಿಗೆ ಹೋಗು, ನಿನ್ನವರು ಅತ್ತು ಅತ್ತು ಸಾಯಿತಿದ್ದಾರೆ,

ಪಾಪ. ನೀನು ಮೊದಲು ಮನಿಗೆ ಹೋಗು ' ಅಂದ. ಇನ್ನ ಮೂರು ದಿನದ ವ್ಯಾಲೆ ದೇವಲೋಕದಾಗೆ ಚುನಾವಣಿ ಅಂತವ್ಮಾ ' ನಿನ್ನ ಪರವಾಗಿ ಯಾರ ನ್ನಾರೆ ಒಬ್ಬರನ್ನ— ಹದಿನೆಂಟು ವರ್ಷ ಮೀರಿದವರನ್ನ— ಕಳಿಸಿಬಿಡು' ಅಂದ ನವ್ಮಾ . ನನ್ನ ಪರವಾಗಿ ಹೋಗಲಿಕ್ಕೇನು, ಒಂದು ಲಕ್ಷಮಂದಿ ನಾ ಮುಂದು ನೀ ಮುಂದು ಅಂತ ಹಾತೊರಿತಾರೆ. ಇಷ್ಟು ಬಳಗ ಬಂಧುಗಳೂ ಬೇಕಾದ ವರೂ ಪ್ರಾಣದ ಗೆಳೆಯರೂ ಭಾಷಣಕ್ಕೆ ಕರಿಸೋ ಅವರೂ ದೇಶದ ತುಂಬ ಇದ್ದಾರೆ. ನನ್ನ ಬದಲೀ ಏನು ಯಾರಾದರೂ ನಾಯ್ತಾರವ್ಮಾ .

## ಸಾವಿತ್ರಿ

(ದುಃಖವನ್ನು ತಡೆಯಲಾರದೆ ರಾಗ ತೆಗೆದು ಹಾಡಿಹಾಡಿ ಅಳುತ್ತ) ಅತ್ತೇರಾ, ಹೋಗ್ತೀರಾ, ಹೋಗ್ತೀರಾ ಹಾಗಾದರೆ, ಹೋಗೇ ಬಿಡ್ತೀರಾ, ಪುಣ್ಯವಂತ್ರವ್ಮಾ ನೀವೂ....ಪುಣ್ಯಾಮಾಡಿ ಹುಟ್ಟೀರಿ....ಮಕ್ಕಳು ಸೊಸಿ ಮೊಮ್ಮಕ್ಕಳನ್ನ ಕಂಡ್ರಿ....ವಟವಟ ಅನುಕೋತ ಆದರೂ ಒಪ್ಪತ್ತಿನ ಅಡಿಗಿ ಮಾಡಿ ಬಿಡಿತಿದ್ರಿ.... ಅಡಿಗಿ ನೆಟಗಿಲ್ಲ ಅಂದ್ರೆ ಸಿಟ್ಟಾಗತಿದ್ರೀ....ನನಗಂತೂ ಅನುಗಾಲ ಖುಸುರೂ ಬಾಣಂತನ, ನಮ್ಮ ಗೊಡ್ಡವ್ವಗ ಮಳಿಗಾಲದಾಗೆ ಕೆಮ್ಮೂ ದಮ್ಮೂ ಅಸ್ತಮ ರೋಗ ಆತು. ಎಲ್ಲಾ ಕೆಲಸ ಆಕೀಮ್ಯಾಲೇ ಬಿತ್ತು ಇನ್ನ. ಇಷ್ಟು ಹುಡುಗರನ್ನ ಆಕಿ ಏನು ಸುಧಾರಸ್ತಾಳೆ. ಆದರೂ ನೀವೇ ಹೋಗಬೇಕಾತೇ ?....ನೀವು ಯಾಕೆ ಬಿಟ್ಟೀರಿ ಅತ್ತೇರಾ ?....ನಿಮ್ಮಂಥವರು ಕೂತಿರಲಿಕ್ಕೆ ನಾ ಹೋಗ್ತೀನಿ ಅಂದರೆ ನೀವಾದರು ಯಾಕೆ ಒಪ್ಪೀರಿ. .ಜನ ಆದರೂ ನಿಮಗೇನು ಅಂದಾರೂ. . .ಅತ್ತೇರಾ ಹೊಂಟಿರಾ....

## ಹೆಂಣವ್ವ

ಛೇ! ಒಳ್ಳೆ ಅನ್ನವ್ಮಾ ಸಾವಿತ್ರಿ....ಹಾಗನಬಾರದೂ ವಾಗತ್ಯಾ....ಚಿಕ್ಕ ಪ್ರಾಯದವರು ನೀವು ಯಾಕೆ ಹೊಗಬೇಕೂ, ಹದ್ದು ಕೂತಹಾಗೆ ಮುದುಕರು ಕೂತಿರಲಿಕ್ಕೆ ? ನಿಮ್ಮತ್ತಿಅವರು ನನಕಿಂತ ಮೂರು ದಿವಸ ದೊಡ್ಡವರು. ಅವರೇ ಹೋಗ್ತಾರೆ, ಅವರ್ಯಾಕೆ ವಲ್ಲೆ ಅಂದಾರು....ನೀನು ಹೋದರೆ ಮಕ್ಕಳು ಪರದೇಶಿ ಆಗ್ತಾವೆ. ಬಂದ್ರೆ ಮಲತಾಯಿ ಬಂದಾಳೂ, ಕೈಗೆ ಹುಡುಗರು ಹ್ಯಾಗಾದರೂ ಜ್ವಾಪಾನ ಆಗ್ಯಾವು....ಹುಟ್ಟಿಸಿದ ದೇವ್ರು ಹುಲ್ಲು ಮೇಯಿಸ್ತಾ ನೇನು ಬಿಡು....ಮಕ್ಕಳ ಯೋಚನಿ ನನಗಿಲ್ಲ.ನನ್ನ ಗತಿ ಏನವ್ಮಾ ಸಾವಿತ್ರೀ....

ಮಕ್ಕಳಿಗೆ ಇನ್ನೊಬ್ಬಾಕಿ ತಾಯಿ ಆದಾಳು, ಆಕಿ ನನಗೆ ಯಾಕೆ ದೊಡ್ಡಮ್ಮಾ ಅಂದಾಳು....ನಂದು ಇನ್ನೇನದೆ ಸೌಭಾಗ್ಯ, ನಾನೇ ಹೋದೇನು. ಏನು ದೊಡ್ಡ ವಿಷಯಾ....ಸಾಯೋದರೊಳಗೆ ಉಡಪಿ ಪರ್ಯಾಯ ನೋಡಬೇಕು ನಾನು. ಮೂರು ಸಲ ಹೋದರೂ ಬಿಡಿದಿವಸದಾಗೇ ಹೋಗಿದ್ದೆ. ಒಮ್ಮೆ ಪರ್ಯಾಯ ನೋಡದೆ ನಾನಂತೂ ಸರ್ವಸರ್ವಥಾ ಸಾಯಲಾರೆ. ನನಗೇನು ಕಷ್ಟ ಆಗ್ಯದೆ ಅಂತ ಸಾಯಲಮ್ಮಾ ನಾನು? ಅಳಿಯ ನನ್ನ ಕಂಡ್ರಂತೂ ಪ್ರಾಣಾ ಕೊಡ್ತಾರೆ. ಒಂದು ದಿವಸ ಆದರೂ ರಾತ್ರಿ ಫಳಾರ ತಪ್ಪಿಸಿಲ್ಲ ಅವರು ನನಗೆ....ಒಂದಿಲ್ಲ ಒಂದು ತಂದು ಇಟ್ಟಿರತಾರೆ. ಅತ್ತೇರೆ, ನಿಮಗೆ ಕಲ್ಲುಸಕ್ಕರಿ ಬ್ಯಾಸರ ಆದರೆ ಕರ್ಜೂರ ತಿನ್ರೀ ಅಂತಾರೆ.ಕರ್ಜೂರ ಖಾರಹತ್ತಿದರೆ ಗ್ವಾಡಂಬಿ ತಿನ್ರೀ ಅಂತಾರೆ. ಪರ್ಯಾಯಕ್ಕೆ ಒಮ್ಮೆ ಕಾರಿನಾಗೇ ಹೋಗೋಣ ಅಂತ ಹೇಳ್ಯಾರವರು. ಹಾಗs ನಾನು ಈಗ ಸತ್ತರೆ ಅವರು ಮನಸು ನೊಂದು ಕೊಂಡಾರೂ....ಪರ್ಯಾಯ ನೋಡದೆ ನಾನಂತೂ ಸಾಪಸಾಪ ಸಾಯಲಾರೆ. ಅಳಬ್ಯಾಡಮ್ಮಾ ಸಾವಿತ್ರೀ, ಹೌದೂ ನನಗೂ ಗೊತ್ತು ಆಗ್ತದೆ. ನಿನಗೆ ಬಹಳ ದುಃಖ ಆಗ್ಯದೆ;ಇದ್ದ ಒಬ್ಬ ಅತ್ತಿನ್ನ ಕಳಕೋಬೇಕು ಅಂದರೆ ಯಾರಿಗಾದರೂ ದುಃಖ ಆಗ್ತದೆ. ಅವರೇನು ಚಿರಂಜೀವಿ ಏನಮ್ಮಾ? ಎಂದಾದರೂ ಹೋಗ ಬೇಕೂ–ಹೋಗ್ತಾರೆ. ಮತ್ತೇನು ಮಾಡ್ಯಾರು ಪಾಪ! ಹೋಗ್ತೀರೇನ್ರೆವ್ವಾ, ಹೋಗೇ ಬಿಡ್ತೀರಾ ಅಂತೂ... ಅಡಿಗಿ ಭಾರ ಎಲ್ಲ ನನಮ್ಯಾಲೆ ಹಾಕಿದಿರಿ. ಜಾಣರಮ್ಮಾ ನೀವೂ........

## ಗೋಪಿ

ನಾನು ಹೋಗಲಿಕ್ಕೆ ರೆಡಿ ಇದ್ದೀನಿ. ಆದರೇನು ಮಾಡಲಿ, ಇನ್ನೊಂದು ಪಾರ್ಟು ಉಳದದೆ ಇಂಟರದೊಳಗೆ....ಈಗ ಸತ್ತರೆ ನನಗೆ ಅಪಕೀರ್ತಿ ಬರ್ತದೆ, ಇಂಟರ ಪಾಸು ಮಾಡಲಾರದೆ ಸತ್ತ ಅಂತ. ಜತಿ ಗೆಳೆಯರೊಳಗೆ ನಗಿಪಾಟ್ಲು ಆಗ್ತದೆ. ನನಗೆ ಇನ್ನೂ ಮೂರು ಛಾನ್ಸ ಅವೆ–ಎರಡು ಮಾರ್ಚ್, ಒಂದು ಸಪ್ಟಂಬರು. ದಿನಾ ಎರಡು ಪೇಜಿ ಓದಿದರೆ ನಾನು ಪಾಸ್ ಆಗೋದು ಗ್ಯಾರಂಟಿ. ಮೂರು ದಿನದಾಗೆ ಸಾಯಬೇಕು ಅಂದರೆ ನಾನು ಹ್ಯಾಗೆ ಸಾಯಲಿ....

**ಪದ್ದು**

ಅಪ್ಪಾ, ಇವರೆಲ್ಲಾರೂ ಕಳ್ಳರು. ಸಾಯಲಾರದ್ದಕ್ಕೆ ಏನಾರೆ ನೆವ ಹೇಳ್ತಾರಪ್ಪಾ, ಇವರು. ಇವರ ಮಾತು ನಂಬಬ್ಯಾಡಾ. ನಿನ್ನ ಇಚ್ಛೆಗೆ ನಾನು ಈಗಲೇ ಹೋಗೇನು, ಆದರೆ ಏನು ಮಾಡಲಿ ನನಗಿನ್ನೂ ಹದಿನೆಂಟು ವರ್ಷ ತುಂಬಿಲ್ಲ. ಇಲ್ಲದಿದ್ದರೆ ನಾನು ನಿನ್ನಾಣೆ ಹೋಗೇ ಬಿಡತಿದ್ದೆನಪ್ಪಾ.

**ತಾರವ್ವ**

ಛೇ ! ಹುಚ್ಚುಹುಡುಗಿ ! ಮದುವಿ ಮಕ್ಕಳು ಕಾಂಬೋ ಆಕಿ ನೀನು, ಹಾಗನಬಾರದೇ ಪದ್ದೂ. ಹಾಲು ತುಪ್ಪ ಅನ್ನು. ನಮ್ಮಂಥವರೂ–ಎಲ್ಲಾ ಮುಗಿಸಿ ಕೂತವರು ಇರಲಿಕ್ಕೆ ನೀನ್ಯಾಕೆ ಹೋಗಬೇಕು ? ನಾನೆಲ್ಲ ಆನಂದ ದಿಂದ ಹೋದೇನು. ಆದರೆ ಇವರು ಯಾಕೆ ಕಳಿಸ್ಯಾರು,ಪಾಪ! ಮನಿ ಅವರೇ ಇಷ್ಟು ಮಂದಿ ಇದ್ದು ನನ್ನ ಯಾಕೆ ಕಳಿಸಿಕೊಟ್ಟಾರು ಪರ್ಯಾಯ ಮನಿ ಆಕಿನ್ನಾ ಅಂತೀನಿ. ಅಲ್ಲದೆ ನನ್ನಿಂದ ಇಡೀ ಊರಿಗೆ ಉಪಕಾರದೆ. ಯಾರೊಬ್ಬರು ಅಂತಾರೆ ನನಗೆ: 'ಅವ್ವಾ, ನೀನು ಇನ್ನೂ ನೂರು ವರ್ಷ ಇರು ಅಂತ'. ಅಂಥಾ ಚೇಳಿನ ಮಂತ್ರ ಅದೆ ನನ್ನ ಹತ್ತಿರ. ಊರ ತುಂಬ ಡಬರಿ ಟೊಪ್ಪಿಗಿ ಮೋಟಾರ ಕಾರಿನ ಡಾಕ್ಟರುಗಳು ಇದ್ರೂನೂ ಸರ್ರಾತ್ರ್ಯಾಗೆ ಬಂದು ಎಲ್ಲಾರೂ ನನ್ನೇ ಎಬ್ಬಿಸ್ತಾರೆ. ನನ್ನ ಕೈ ಅಂಥಾದು. ಇರೋ ನಾನೊಬ್ಬಾಕೀನೂ ಹೊರಟು ಹೋದರೆ ಊರಾಗೆ ಯಾರಿಗಾದರೂ ಚೇಳು ಕಡಿದರೆ ಏನು ಗತಿ ? ಒಬ್ಬಾತನ ಜೀವ ಉಳಸಲಿಕ್ಕೆ ಅಷ್ಟು ಮಂದಿನ್ನ ಹ್ಯಾಗೆ ಕೊಲ್ಲಲಿ ? ನಾನು ಹ್ಯಾಗೆ ಸಾಯಲಿ, ಆಚಾರ್‍ರೇ....

**ಆಚಾರ್ಯರು**

ಯಥಾರ್ಥ ಮಾತು ಆಡಿದಿರಿ ತಾರವ್ವಾ ನೀವು. ನೀವು ಅಂಥಾಗೆ ಮನಿ ಅವರೇ ಇಷ್ಟು ಜನ ಇದ್ದು ಹೊರಗಿನವರಾದ ನಮ್ಮನ್ನ ಯಾಕೆ ಕಳಿಸ್ಯಾರು ಪಾಪ! ದೇವ್ರು ಬ್ರಾಂಬ್ರು ಅಂದರೆ ಭಾಳಾ ಭಯ ಭಕ್ತಿ ಈ ತಿಂಮರಾಯಗೆ. ನನ್ನ ಕಳಿಸಿ ಈ ಗೃಹಸ್ಥ ಬ್ರಹ್ಮಹತ್ಯಾ ಯಾಕೆ ಕಟಿಗೊಂಡಾನು? ಇನ್ನೂ ಆತನ ಮಕ್ಕಳಿಗೆ ಎರಡು ಎಳಿ ಹಾಕಿ ಆ ಹುಡುಗರನ್ನ 'ಭವತೀ ಭಿಕ್ಷಾಂದೇಹಿ' ಅಂತ ಕಳಿಸಬೇಕು ನಾನು. ನಾನೇ ಹೋಗಿಬಿಟ್ಟರೆ ಈ ಮನಿ ಬ್ರಾಹ್ಮಣಿಕೆ ಹೊಲೇರ ಪಾಲು ಆದೀತು. ಜವಾಬ್ದಾರಿ ತಪ್ಪಿಸಿಗೊಳ್ಳಲಿಕ್ಕೆ ನಾನೆಲ್ಲ ಆನಂದ

ದಿಂದ ಸತ್ತೀನು. ಸಾಕ್ಷಾತ್ ದೇವತಿಗಳೇ ಬಂದು ನನ್ನ ವಿಮಾನದಾಗೆ ಒಯ್ತಾರೆ, ವೈಕುಂಠಕ್ಕೆ–ಎಲ್ಲಿಲ್ಲೂ ಇಳಸದಂತೆ. ಆದರೆ, ನನ್ನ ಕಳಿಸಿ ಈ ತಿಂಮರಾಯ ಯಾವ ನರಕಕ್ಕೆ ಹೋಗಬೇಕು, ಪಾಪ !

### ತಿಂಮ

( ಸುತ್ತಲೂ ಕುಳಿತಿರುವ ಆಪತ್ಬಂಧುಗಳನ್ನೊಮ್ಮೆ ಕಣ್ತುಂಬ ನೋಡಿ ) ಛೆ ಛೆ ! ಯಾರಾದರೂ ಯಾಕೆ ಹೋಗಬೇಕು. ಪಾಪ ! ಯಾರಿಗೆ ಬಂದದ್ದು ಅವರವರಿಗೆ. ಇನ್ನು ಮೂರು ದಿವಸಾದ್ರೂ ಇಲ್ಲಿ ಕೂತು ಏನು ಮಾಡಬೇಕು? ಆ ದೇವರಿಗೊಂದು ಹುಚ್ಚು, ಅಳತಾರೆ ಹೋಗಪಾ ಅಂದ. ನಾ ಇನ್ನ ಹೊರಟೆ, ಬರಲ್ಯಾ ಸಾವಿತ್ರಿ....ಹೋಗಿ ಬರ್ತೀನಮ್ಮಾ ( ಗಂಡವ್ವ ಅರೆಗಂಣು ಮುಚ್ಚಿ ತೃಪ್ತಿಯ ಮುಖಮುದ್ರೆಯಿಂದ ಕುಳಿತಿದ್ದಾಳೆ. ) ಅಮ್ಮಾ ಅಮ್ಮಾ....

### ಗಂಡವ್ವ

(ಕಂಣು ತೆರೆದು) ತಿಂಮಾ, ನಿನ್ನ ನೀನು ಅರಿತುಗೊಂಡು ನಾಲ್ಕು ಕಾಲ ಬಾಳಪಾ. ಎಲ್ಲರ ಸುಖದಾಗೇ ನಿನ್ನ ಸುಖ ಅಂಬೋದನ್ನ ಮರಿಬ್ಯಾಡ. ನಾನು ಬರ್ತೀನಪಾ. ನಿನ್ನ ಸಂಸಾರ ನಿನಗೆ ಹೊಂದಿತು ಇನ್ನ. ನಾನು ಆ ವಿಶ್ವಸಂಸಾರಿ ಹತ್ತರ ಹೊರಟೆ. ನಾನು ಆಗಲೆ ಅಂದುಕೊಂಡಂತೆ ಹೊರಟೆ. ನಿನ್ನ ನೀನು ಅರಿತುಗೊಳ್ಳಪಾ ತಿಂಮಾ ( ಕಣ್ಣು ಮುಚ್ಚುವಳು. )

### ತಿಂಮ

(ದುಃಖಾವೇಶದಿಂದ) ಅಮ್ಮಾ ಅಮ್ಮಾ , ನೀನು ಹೋಗಬೇಡಮ್ಮಾ.... ಅಯ್ಯೊ ಅಯ್ಯೊ ನಾನೂ ಬಂದೆನಮ್ಮ , ಬಂದೆ ಬಂದೆ.... ( ತಿಂಮನ ತುಂಬು ಗಂಣಲ್ಲಿ ಕಾಂತಿ ಹೊಳೆಯುವದು. ಮೇಲಕ್ಕೆ ಕೈ ಎತ್ತಿ ಧುಪ್ಪೆಂದು ನೆಲಕ್ಕೆ ಬೀಳುವನು. )

### ಬೀಚಿ

( ಎತ್ತಲಿಂದಲೋ ಓಡಿಬಂದು ನಿಜವಾದ ದುಃಖದಿಂದ ) ಅಯ್ಯೊ, ತಿಂಮಾ....ಚಾಂಡಾಲಾ....ಸತ್ತೇ ಹೋದೇನಪಾ ! ನನ್ನ—ಬಡವನ್ನ, ಮಕ್ಕಳಂದಿಗನ್ನ—ಹಾಳು ಮಾಡಿ ಬಿಟ್ಟೆಲ್ಲೊ ತಿಂಮಾ....ನಿನ್ನ ಜೊತೆಯಲ್ಲಿ

ಕುಣಿಕುಣಿದು ನಾನು ಹುಚ್ಚುಮಂಗ ಆದೆನಲ್ಲೊ ತಿಂಮಾ....ನಿನ್ನ ನಂಬಿ, ಅದೇನೋ ನಿನ್ನ ಸಾಹಿತ್ಯವಾಲಾ ಅಂತ ಹಚ್ಚಿಗೊಂಡು ಊರು ತುಂಬಾ ಸಾಲಾಮಾಡಿ ನಿನ್ನ ತಲಿ ಪ್ರಕಟಿಸಿದೆ. ನಿನ್ನ ಸಾಹಿತ್ಯವಾಲಾದ ಹವಾಲ ಆದೆನಲ್ಲೊ ತಿಂಮಾ....ಸಾಯೋದು ನತ್ತಿ, ಇದಿಷ್ಟು ಸಾಲಾ ತೀರಿಸಿ ನತ್ತಿದ್ದರೆ ನಾನೇನು ಬ್ಯಾಡ ಅನ್ನತಿದ್ದೆನೇನಪಾ, ಅಯ್ಯೊ ತಿಂಮಾ....

( ಗೋಳಿಡುವನು )

---

# ಶ್ರೀಮಚ್ಛ್ಮಶಾನಪೆ ಗೀತಾ

## ಪಾತ್ರಗಳು

೧. ಅರ್ಜುನಸೋಪಾದಿಯಲ್ಲಿರುವ ಒಬ್ಬ ಮತದಾರ; ದುರ್ದೈವದಿಂದ ಬುದ್ಧಿಜೀವಿ.

೨. ಭಗವಾನ್ ತಿಂಮ.

(ಪ್ರಸಂಗ— (ಅ)ಧರ್ಮಕ್ಷೇತ್ರೇ ಕುರು (ರು) ಕ್ಷೇತ್ರೇ— ಹುರಿಯಾಳುಗಳೆಂಬ ದೈತ್ಯದಾನವರು ಧನಪಾನದಿಂದ ಮದೋನ್ಮತ್ತರಾಗಿ, ತಮ್ಮ ಅಪಾರ ಏಜಂಟರ ಸೇನೆಗಳೊಂದಿಗೆ ಓಟ್ಸ್ ಮೊಬೈಲ್, ಹಿಲ್ಮನ್ ಫೋರ್ಡ್, ಚೆವ್ರೋರ್ಲೆಟ್ ರಥಾರೂಢರಾಗಿ ರಣರಂಗಕ್ಕೆ ಧಾಪಿಸಿದ್ದಾರೆ. ಸಹಸ್ರಾರು ಸೋಡಾಲೆಮನ್ ಜಿಂಜರಾದಿ ಬಾಟ್ಲಿಗಳು ಒಮ್ಮೆಲೆ ಢಂ ಢಂ ಎಂದು ಮತದಾರರನ್ನು ಕಿವುಡುಮಾಡುತ್ತಿವೆ. 'ತ್ರೀಕ್ಯಾಜಿಲ್ಸ್'ದಿಂದ ಹಿಡಿದು 'ಸ್ಪ್ಯಾಡ್‌ರಟ್ಸ್ ಓನ್ ಬೀಡಿಸ್'ದ ವರೆಗೂ ಎಲ್ಲವೂ ಅಗ್ನಿನಾರಾಯಣನಿಗೆ ಆಹುತಿಯಾಗಿ ಇಡೀ ಆಕಾಶವು ಧೂಮ್ರದಿಂದ ತುಂಬಿ ಕಾಣದಾಗಿದೆ. ರಥಗಳಿಂದ ಜಿಗಿದು ಹಾರಿಬಂದಿರುವ ಅಸ್ತ್ರಗಳಂತೂ ನಾನಾ ಬಗೆಯವು ಇವೆ-ಎರಡೂವರೆ ಆಣೆಯ ಬಿಳೀಟೊಪ್ಪಿಗೆ ಒಬ್ಬನ ಕೈಯಲ್ಲಿ, ತಂಡಸ ಗಡ್ಡ ಇನ್ನೊಬ್ಬನ ಮುಖದಲ್ಲಿ, ಏಕೀಕರಣದ ಕಿರೀಟವು ಮತ್ತೊಬ್ಬನ ಮುಂದಲೆಗೆ, ನೇಗಿಲು, ಕಸಬರಿಗೆ, ದೋಸೆಯ ಚುಚ್ಚುಗ, ಮುಂತಾದ ಚಿತ್ರಗಳುಳ್ಳ ಧ್ವಜಗಳು ಹಲವರ ಕೈಯಲ್ಲಿ, ಆದರೆ ಜಾತೀಯ ಸರ್ಪಾಸ್ತ್ರವು ಮಾತ್ರ ಸರ್ವರ ಕಿಸೆಯಲ್ಲಿ! ಬುದ್ಧಿಜೀವಿಯಾದ ಓರ್ವ ಯಃಕಶ್ಚಿತ್ ಮತದಾರನು ಮೊಣಕಾಲು ಬಾಗಿ ಕೈ ಮುಗಿದು ತಿಂಮ ದೇವನ ಮುಂದೆ ನಿಂತಿದ್ದಾನೆ.)

# ಪೂರ್ವಪಕ್ಷ

## ಮತದಾರ

(ಕಣ್ಣು ಮುಚ್ಚಿ, ಕರ ಜೋಡಿಸಿ, ಬಾಯಿತೆರೆದು, ಎಡಗಡೆ ಗೋಣು ಎಸೆದು ಗದ್ಗದ ಕಂಠದಿಂದ) “ಹಾ, ತಿಂಮಾತ್ಮಾ! ನಾನೂ ನೀನೂ ಕೂಡಾ ದಿಙ್ಮೂಢರಾಗಿದ್ದೇವೆ. ನನಗಂತೂ ದಿಕ್ಕು ತೋಚದಾಗಿರುವದಷ್ಟೇ ಅಲ್ಲ, ಅಷ್ಟ ದಿಕ್ಕುಗಳು ಎಷ್ಟು ಇವೆ? ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ನೈರುತ್ಯ, ಆಜ್ಞೇಯ ಈಶಾನ್ಯ, ವಾಯುವ್ಯಗಳ ಹೆಸರುಗಳೇನು? ಇವೆಲ್ಲವೂ ಯಾವ ದಿಕ್ಕಿನಲ್ಲಿ, ಎಂಬುದೂ ಸಹ ತಿಳಿಯದಾಗಿದೆ. ಸ್ವಾತಂತ್ರ ಹೋರಾಟವೆಂಬ ಮಹಾ/ಅಥವಾ/ಮತ್ತು ಘೋರ ತಪಸ್ಸನ್ನು ಆಚರಿಸಿ 'ಧರ್ಮರಕ್ಕಸಿ' (ಡೆಮೊಕ್ರಸಿಯ ಸವತಿ) ಯನ್ನು ಒಲಿಸಿ 'ಮತದಾನ ಹಕ್ಕು' ಎಂಬ ಗಾಂಡೀವವನ್ನು ಪಡೆದು ಬಂದಿದ್ದೇನೆ. ಈ ಕುರುಡು ಕ್ಷೇತ್ರದಲ್ಲಿ ಮಾತ್ರ ಕಕ್ಕಾಬಿಕ್ಕಿಯಾಗಿ ಬೆಪ್ಪನಾಗಿದ್ದೇನೆ. ಎಲೈ ತಿಂಮದೇವಾ! ನನ್ನ ಮನೋಸ್ಥಿತಿಯನ್ನು

ನಿನ್ನ ತಿಂಮು ಚಕ್ಷುವಿನಿಂದ ಕನ್ನಡಕದ್ವಾರೇ ನೋಡುವಂಥಾತ್ತನಾಗು. ನನ್ನ ಮತವನ್ನು ಯಾರಿಗೆ ಕೊಡಲಿ, ಯಾರು ಯೋಗ್ಯರು ಎಂಬುದಲ್ಲವೇ ಅಲ್ಲ ನನ್ನ ಪ್ರಶ್ನೇ. ನನ್ನ ಮತವನ್ನು ಯಾರಿಗೆ ಕೊಡದಿರಲಿ, ಯಾರು ಅಯೋಗ್ಯ ರಲ್ಲ ಎಂಬುವೇ ನನ್ನನ್ನು ಸತತವಾಗಿ ಕಾಡಿ ಹಿಂಡಿ ಹಿಪ್ಪೆ ಮಾಡುತ್ತಿರುವ ಸಮಸ್ಯೆ. ನೋಡು ದೇವಾ, ನನ್ನ ಆರ್ತಧ್ವನಿಯು ಹೇಗೆ ತಾನಾಗಿಯೇ ಬಾಯಿಂದ ಹೊರಬೀಳುತ್ತಲಿದೆ, ಚುನಾವಣೆ ಸಸಿಯು ಬಂದಾಗ ಕಿಟಲಿನಿಂದ ಚಹ ಬಿಟ್ಟಂತೆ. ತಿಂಮುದೇವಾ! ನನಗೆ ಜ್ಞಾನೋದಯವನ್ನು ಮಾಡಿಸು. ನನ್ನ ವಿಚಾರಶಕ್ತಿಯು ಕುಂಠಿತವಾಗಿ ಸುಟ್ಟು ಇದ್ದಲೀಭೂತವಾಗಿದೆ ನೋಡು. ಚಿಕ್ಕ ಮಗುವಿನಂತೆ ಅಳುವಂತಾಗಿದೆ ನನ್ನ ಗತಿ. ಆರು ಗಂಟೆ ಆಗುತ್ತ ಬಂದಿತು,ಬೇಗ ಹೇಳು ಯಾರಿಗೆ ಹಾಕದಿರಲಿ ನನ್ನ ಮತವನ್ನು. ತಥ್ಯವಾವುದು ಮಿಥ್ಯವಾವುದು ಪಥ್ಯವಾವುದು ಅಪಥ್ಯವಾವುದು ಎಂಬುದೇ ತಿಳಿಯದಾಗಿದೆ ಈ ಅಲ್ಪಮತಿಗೆ. ತಿಂಮತ ದೇವಾ ! ನನಗೆ ನಿನ್ನ ಚುನಾವಣೆ ಗೀತೆಯನ್ನು ಚಮಚೆಯಿಂದ ಕುಡಿಸು.ನನ್ನ ಏಕ ಮಂತ್ರ ಧನುಸ್ಸಾದ ಮತವೆಂಬ ಗಾಂಡೀವ ವನ್ನು ಕಿಸೆಯಲ್ಲಿರಿಸಿ ಕೈ ಚೆಲ್ಲಿ ಅಸ್ವಸ್ಥ ಕುಳಿತಿದ್ದೇನೆ ನೋಡು. ರೂಪಾಯಿ ಚೀಲಗಳೆಂಬ ಈ ಮಂದ ಮುಂದಾಳುಗಳಿಗೆ ಮತ ಕೊಟ್ಟರೆ ಸ್ವರಾಜ್ಯದಾಹೆ ಯಾಗಿಯೂ ಮತವಧೆಯಾಗುವದು; ಯಾರಿಗೂ ಕೊಡದೆ ಬಿಟ್ಟರೆ ಪ್ರಜಾ ಪ್ರಭುತ್ವಗ್ಲಾನಿಯಾಗುವದು. ಬೇಗ ಹೇಳು. ಸುತ್ತಮುತ್ತಲೂ ನಿಂತಿರುವ ಯಾವ ಕಳ್ಳರಿಗೆ ಕೊಡಲಿ ನನ್ನ ಮತವನ್ನು? ಯಾರು ನಿಜವಾದ ಸ್ವಾರ್ಥಿಗಳು ಯಾರು ಸಹಜವಾದ ಸ್ವಾರ್ಥಿಗಳು, ಎಂಬುದೇ ತಿಳಿಯದಾಗಿದೆಯಲ್ಲಾ ? ತಿಂಮೋಂದ್ರಾ !

ಹಳೆಯ ಎತ್ತನ್ನು ಹೊಳೆಯಲ್ಲಿ ಹೂಡಿ ನೋಡು ಎಂಬ ಹಿತ್ತೋಕ್ತಿ ಯನ್ನನುಸರಿಸಿ, ಹಳೆಯದಾಗಿರುವ– ಬಣವೇ ಬದಲಾಗುವಷ್ಟು ಹಳೆಯದಾಗಿರುವ— ಹಳೆಯ ಹುಳಿ ಹಳದಿಯ ಡಬ್ಬಿಗೇ ಹಾಕಲೇ ನನ್ನ ಅಮೌಲ್ಯ ಮತವನ್ನು ? ಮೊನ್ನೆ ಮೊನ್ನೆ— ಚುನಾವಣೆಯ ದುರ್ವಾಸನೆ ಬಂದ ಕೂಡಲೇ–ಹೆಣದಂತಿದ್ದ ಈ ಹಳದಿ ಪೆಟ್ಟಿಗೆಯು ಒಮ್ಮೆಲೆ ಎದ್ದು ಸೀದಾ ಪ್ರಮಾಣವನ್ನು ಹೆಚ್ಚಿಸಿ ಅನ್ನದಾನ ಮತ್ತು ಚಪಾತಿದಾನ ಮಾಡಿದೆ. ಬಂಡೆಯ ಮೇಲೆ ಗಿಡವನ್ನು ನಟ್ಟಿದೆ. ಉದಾರ ಮನಸ್ಸಿನಿಂದ ಮೂಲಭೂತ ಹಕ್ಕುಗಳನ್ನು ಕನ್ನಡಿಯಲ್ಲಿಯೇ ತೋರಿದೆ.ಇನ್ನೂ ಏನೇನನ್ನೋ

ಪುಟ್ಟಿಗಟ್ಟಲೆ ಮಾಡಿದೆ. ಅವೆಲ್ಲವುಗಳನ್ನು ಹೇಳಿದರೆ ಸ್ವಾರಸ್ಯವಿಲ್ಲ.

ಇಲ್ಲವೆ ಕೆಂಪುಟೊಪ್ಪಿಗೆಯವರಿಗೆ ಕೊಡಲೇನು ನನ್ನ ಮತವನ್ನು? ಟೊಪ್ಪಿಗೆಯ ಬುಡದಲ್ಲಿ ತಲೆ ಇರಲೇ ಬೇಕಲ್ಲವೆ ತಿಂಮದೇವಾ? ಪಾಪ! ಈ ಅಳಿಯಂದಿರು ಪಡುತ್ತಿರುವ ಕಷ್ಟ ಸಂಕಷ್ಟಗಳಾದರೂ ಎಷ್ಟು? ಪ್ರತಿ ನಿತ್ಯವೂ, ಅನುದಿನವೂ, ದಿನಾಲೂ, ಊಟಮುಗಿಸಿದನಂತರ ಹಸಿದ ಹೋಟಲ ಹುಡುಗರ ಮೆರವಣಿಗೆಗಳನ್ನು ತೆಗೆಯುತ್ತಾರೆ. ಜನರು ಕುಳಿತಲ್ಲಿಯೆ ಬಂದು ಭಾಷಗಳ ಬೆಂಕಿಮಳೆಯನ್ನು ಬಿಡದೆ ಸುರಿಸುತ್ತಾರೆ. ಕಾಸು ಕೊಡದೆ ಕಾಫಿ ಕುಡಿದ ಈ ಬಾಲವಾಲಂಟರಿಗಳು ರಸ್ತೆತುಂಬ ಘೋಷಿಸುತ್ತವೆ:—

"ನಮ್ಮ ಪಾರ್ಟಿಗೆ ಜಿಂದಾಬಾದ್! ಹೋಟೆಲ ಕಾರ್ಮಿಕರಿಗೆ ಮುಸಿರಾ ಬಾದ್! ಜಯ ಪ್ರಕಾಶಕಿ ಜಯವೇಬಾವ್! ಓಟು ಕೊಟ್ಟವರು ಮುರ್ದಾ ಬಾದ್!!

ಇಲ್ಲವೆ ತೊಪ್ಪಿಗೆಸಹ ಇಲ್ಲದೆ ಬರೀಕೂದಲಿರುವ ಕಮ್ಯೂನಿಷ್ಟರಿಗೇ ಕೊಟ್ಟು ಬಿಡಲೇ ನನ್ನ ಮತವನ್ನು? ಕೂದಲಿದ್ದ ಮೇಲೆ ತಲೆಯೂ ಇರಲೇ ಬೇಕಲ್ಲವೆ? ಇವರಿಗೆ ನಾವು ಮತ ಕೊಡುವ ಪ್ರಶ್ನೆಯೇ ಉದ್ಭವಿಸುವಂತೆ ಕಾಣುವದಿಲ್ಲ. ನಾವಾಗಿ ಕೊಡುವವರೆಗೂ ಅವರು ಸುಮ್ಮನೆ ಕುಳಿತ್ತಿ ತಾನೆ? ತಲೆಯೊಡೆದು ಕಿಸೆಹರಿದು ಕಸಿದುಕೊಂಡೇ ಹೋಗುತ್ತಾರೆ ಮತಗಳನ್ನು. ಕೂಡಲೆ ನೆಲಗತ ಅಥವಾ ಜಲಗತರಾಗುತ್ತಾರೆ. ಇಲ್ಲವೆ ಜೇಲುಗಳಲ್ಲಿ ಕೊಳೆ ಯುತ್ತಾರೆ.

ಇನ್ನಾರಿಗೆ ಕೊಡದಿರಲಿ ಪೇಳುವಂಥಾತ್ತನಾಗು. ಜಂಗು ಹಿಡಿದಿರುವ ಜಸ್ಟೀಸ್ ಪಾರ್ಟಿಗೆ ಕೊಟ್ಟರೆ ಹೇಗೆ? ಇದರ ಭೂಗೋಳ ಮತ್ತು ಚರಿತ್ರೆ ಗಳು ಎಲ್ಲರೂ ಅದರ (ಹೆಬ್) ಬೆರಳನ್ನೇ ಕಚ್ಚುವಂತಿವೆ. ಈ ಪಾರ್ಟಿಯು ಬ್ರಾಹ್ಮಣೋದ್ಧಾರಕ್ಕಾಗಿ ಅನುಗಾಲವೂ ಹೆಣಗಿ ಹೆಣವಾಗಿದೆ. ಸ್ವಜಾತಿ ಪ್ರೇಮದಕಿಂತಲೂ ಪರಜಾತಿ ದ್ವೇಷವೇ ಶ್ರೇಷ್ಠವೆಂಬ ಮಧುರತತ್ವವನ್ನು ಜಗತ್ತಿಗೆ ಬೀರಿದೆ. ಸಹಸ್ರಾರು ಕೈನೂಲಿನ ಜನಿವಾರಗಳನ್ನು ಜೀರ್ಣಿಸಿ ಕೊಂಡ ಉಜ್ವಲ ಅಪಾರ ಕೀರ್ತಿಯು ಇದರ ಬಾಗಿಲಿಲ್ಲದ ಗೋಡಾವುನು ಗಳಲ್ಲಿ ಕೇಳುವವರಿಲ್ಲದೆ ಹೊಳೆಯುತ್ತಿದೆ, ಕೊಳೆಯುತ್ತಿದೆ. ಈ ಪಾರ್ಟಿಯ ಘೋಷಣಾ ಪತ್ರದಲ್ಲಿಯ ಹನ್ನೆರಡನೆ ಅಭಿವಚನವೇ ಸಾಕು! "ಮಿತಪಾನವೇ

ನಮ್ಮ ಮಂತ್ರ, ಸೆರೆಯಂಗಡಿಗಳ ಜೀರ್ಣೋದ್ಧಾರವೇ ನಮ್ಮ ಜೀವನದ ಸಾರ್ಥಕ.” ಕುಡಿಯುವ ಮುನ್ನೆಯೇ ಹೀಗೆಲ್ಲ ಮಾತನಾಡುವವರು ಕುಡಿದ ಮೇಲೆ ಏನನ್ನು ಮಾಡಲಾರರೋ ಬಲ್ಲವರಾರು ?

ಏಕೀಕರಣಕ್ಕೆ ಮತಕೊಡಲೇನು ತಿಂಮಜ್ಜ ? ಹಳೆಯ ಹಾಕೋಪತಿಗಳು ಹೋಗಿದ್ದಾರೆ–ನಿಜ, ಆದರೆ ಈ ಹೊಸ ಗೊತ್ತುವಳಿ ಪತ್ರಿಗಳು ಏನು ಮಾಡುವರೋ ಯಾರಿಗೆ ಗೊತ್ತು ? ಈಗಾಗಲೆ ಶಯ್ಯಾಗ್ರಹ ವಚನಗಳನ್ನು ಕೊಟ್ಟ ಅನೇಕರು ಏನು ಮಾಡಿದ್ದಾರೆಂಬುದನ್ನು ಅರಿತಿದ್ದೇವೆ. ಪ್ರಾಂತಕ್ಕಾಗಿ ಪ್ರಾಣವನ್ನೇ ಕೊಡುತ್ತೇನೆಂದು ಉಡುಪಿಯಲ್ಲಿ ನುಡಿದವರು, ಪ್ರಜಾಪ್ರತಿಗಳಾಗಿ ಬೆಜವಾಡಕ್ಕೆ ಬಂದಾಗ ಪ್ರಾಂತವೇ ಬೇಡ ಎಂದು ಹೇಳಿದರಂತೆ. ಕೊಡುತ್ತೇವೆ ಎಂದಾಗಲೆ ತೆಗೆದುಕೊಂಡಿದ್ದರೆ ಎಷ್ಟು ಚೆನ್ನಾಗಿತ್ತು ? ಪ್ರಾಣವನ್ನು ಕೊಡುತ್ತೇವೆ ಎಂದು ಎಲ್ಲರೂ ಅನ್ನಲು ಸಾಧ್ಯವೇ, ನಾವು ತೆಗೆದುಕೊಳ್ಳುತ್ತೇವೆ ಎಂದು ತಿಳಿದರೆ? ಈ ಹೊಸೇಕೀಕರಣವಾದರೂ ಎಷ್ಟು ಸುಂದರವಾಗಿ ರಾರಾಜಿಸುತ್ತಿದೆ ನೋಡು, ದೇವಾ ! ಸರ್ವಪಕ್ಷಿಗಳ ಸಮ್ಮೇಳವದ ಫಲವಾಗಿ, ಕಾಮನ ಬಿಲ್ಲಿನ ಎಲ್ಲ ಬಂಣಗಳೂ, ಮತಕಾಮಿಗಳ ಎಲ್ಲ ಬಣಗಳೂ ಹೆಣಕ್ಕೆ ಮುಕುರುವ ಸೋಣಗಳೂ, ಮುಂದೆ ಮೇಯರರು (ಅರ್ಥಾತ್ ಮೇಯುವವರು) ಆಗುವ ಆಸೆಯ ಹುಂಬ ಹೊಚ್ಚ ಹುಚ್ಚ ಕುರಿಮರಿಗಳೂ ತುಂಬಿ ಬಿಟ್ಟಿವೆ. ಓಟು ತಿಂದ ಕೂಡಲೆ ಇವು ಗೊರಕೆ ಹೊಡೆಯಲಿಕ್ಕಿಲ್ಲವಷ್ಟೆ ?

ಇನ್ನು ಉಳಿದವರು ಸ್ವತಂತ್ರ ಹುರಿಯಾಳುಗಳು. ಇವರಂತೂ ಸರ್ವಸ್ವತಂತ್ರರು ! ಈಗ ತಮಗೆ ಬೇಕಾದಂತೆ ಹೇಳಲೂ ಸ್ವತಂತ್ರರು, ಆಗ ನಮಗೆ ಬೇಡಾದಂತೆ ಮಾಡಲೂ ಸ್ವತಂತ್ರರು. ಬಹುಮತವಿದ್ದ ಪಾರ್ಟಿಯ ಬಾಲವಾಗುವ ಇವರನ್ನು ನಂಬಿ ಕೆಡದವರಾದರೂ ಯಾರು ದೇವಾ! ಗಾಳಿ ಬಂದಂತೆ ತೂರಿಕೊಳ್ಳುವ ಗಂಡುಗಳು ಇವು.

ಮುಂದೇನು ಮಾಡಲಿ ಹೇಳು ತಿಂಮ ದೇವಾ ! ನನ್ನ ಕಣ್ಣಿಗೆ ಮಬ್ಬು ಬರುತ್ತಿದೆ, ಹುರಿಯಾಳುಗಳ ಏಜಂಟರ ಬೀಡಿಯ ಹೊಗೆಯಿಂದ. ಕಿವಿಗಳಿಗೆ ಕಿವುಡು ಬರುತ್ತಿದೆ, ದೇ.ಭರ ಭಾಷಣಗಳ ಹೊಡೆತದಿಂದ. ಹಾ ತಿಂಮಾ, ತಿಂಮಾ (ಮೂರ್ಛಿತನಾಗಿ ದಪ್ಪೆಂದು ನೆಲಕ್ಕೆ ಬೀಳುವನು.)

## ಪಶ್ಚಿಮ ಪಕ್ಷ

(ಸರ್ವಾಂತರ್ಯಾಮಿಯೂ ಸರ್ವಶಕ್ತನೂ ಸರ್ವಭಕ್ಷಕನೂ ಆದ ತಿಂಮ ದೇವನು ನಿಶ್ಚೇಷ್ಟನಾಗಿ ಬಿದ್ದಿದ್ದ ಮತದಾರರನ್ನು ಮೂಗು ಹಿಡಿದು ಮೇಲೆಬ್ಬಿಸಿ ಸೋಡಾ ಮುಂತಾದ ಫರ್ಸ್ಟ್ ಏಡ್ ಕೊಟ್ಟು, ಅಡಿಕೆ ಕಡಿಸಿ, ಉವಾಚ--)

### ತಿಂ. ದೇವ

ಎಲೈ, ಗೋಕುಲದ ಮಾನವ ಮತದಾರನೇ !

### ಮತದಾರ

(ಅರ್ಥವನರಿಯದೆ) ಇದೇನು ತಿಂಮೇಂದ್ರಾ, ನನ್ನನ್ನು ಗೋಕುಲದವನೆಂದು ಸಂಬೋಧಿಸುವಿ ? ನಾನು ಉತ್ತರದ ಗೋಕುಲದವನಲ್ಲ, ಪಕ್ಕಾ ಕರ್ನಾಟಕ ಪ್ರಾಂತದವನು.

### ತಿಂ. ದೇವ

ಅಯ್ಯೋ ಹುಚ್ಚಾ ! ಕರ್ನಾಟಕದವನೆಂದೇ ನಿನ್ನನ್ನು ಗೋಕುಲದವನೆಂದು ಕರೆದುದು. ನೀವೇ ನಿಜವಾದ ಗೋ—ಕುಲದವರು. ಇದನ್ನರಿತೇ ಎಲ್ಲರೂ ನಿಮ್ಮನ್ನು ಚೆನ್ನಾಗಿ ಹಿಂಡುತ್ತಿದ್ದಾರೆ. ಎಲೈ, ಮಗುವಿನ ಅವಸ್ಥೆಯಲ್ಲಿರುವ ಗಡ್ಡ ಮೀಸೆ ಹೊತ್ತ ಗಂಡುಮಾನವನೇ ! ನಾಂ ಪೇಳುವದಂ ಆಲಿಸು. ನೀನೇ ಕರು, ಚುನಾವಣೆಯೇ ಹಸು, ನಾನು ಈಗ ಪೇಳುವ ಗೀತೆಯೇ ಅದರ ಕ್ಷೀರ, ನಾನೇ ಗೌಳಿ. ಕುಡಿ, ಕುಡಿ ಕುಡಿದು ತೇಗು. ನಿನ್ನ ಸಮಸ್ಯೆಯು ನಿಜವಾಗಿಯೂ ಜಟಿಲವಾದುದು. ಯಾರಿಗೆ ಮತ ಕೊಟ್ಟರೂ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳದೇ ಬಿಡುವದಿಲ್ಲವೆಂಬುದೇ ಅಲ್ಲವೆ ನಿನ್ನ ದೂರು. ಎಲೈ, ದಿಗ್ಭ್ರಾಂತನಾದ ಮಾನವ ಮೃಗವೇ ! ತುಪ್ಪದ ಮಡಿಕೆಯ ಕತೆಯನ್ನು ನೀನು ಕೇಳಿಲ್ಲವೇ ?

### ಮತದಾರ

ಇಲ್ಲ ಇಲ್ಲ, ತಿಂಮದೇವಾ. ಕನ್ನಡದಲ್ಲಿ ಒಳ್ಳೆಯ ಕತೆಗಳೇ ಬರುವದಿಲ್ಲ ಈ ಮಧ್ಯೆ. ಬರೀ ದೆವ್ವದ ಕತೆಗಳನ್ನು ಬರೆದು ಬಹುಮಾನ ಪಡೆಯುವ ದೆವ್ವನಂತಹರೇ ಹೆಚ್ಚಾಗುತ್ತಿದ್ದಾರೆ. ಅದೇನು ಕತೆ ಅದು, ತುಪ್ಪದ ಮಡಿಕೆಯ ಕತೆ ಕೊಂಚ ಪೇಳುವಂಥಾತ್ತನಾಗು ತಿಂಮೇಂದ್ರಾ.

## ತಿಂ. ದೇವ

ನಿನ್ನಂತಹ ಮೂರ್ಖನೊಬ್ಬನು ಹೊಸ ಮಡಿಕೆಯೊಂದರಲ್ಲಿ ತುಪ್ಪ ತುಂಬಿ ಇಕ್ಕಿದನಂತೆ. ನಾಲ್ಕು ದಿನಗಳನಂತರ ನೋಡಿದಾಗ ತುಪ್ಪ ಅರ್ಧದ ಮೇಲೆ ಮಾಯವಾಗಿದ್ದಿತಂತೆ. ಎಲ್ಲಿ ಹೋಯಿತು ಅಷ್ಟು ತುಪ್ಪವೆಂದು ಯೋಚಿಸುತ್ತಿದ್ದಾಗ ಪಕ್ಕನೆ ಹೊಳೆಯಿತಂತೆ ಅವನಿಗೆ ಸತ್ಯ. ಮಡಿಕೆಯು ಹೊಸತು; ಅದೇ ಕುಡಿದು ಬಿಟ್ಟಿದ್ದಿತು. ಇದು ಕಳ್ಳ ಮಡಿಕೆ, ಇದನ್ನು ಒಡೆ ಯಲೇ ಬೇಕು ಎಂದು ನಿರ್ಧರಿಸಿ ಬೇರಿನ್ನೊಂದು ಹೊಸ ಮಡಿಕೆಗೆ ಉಳಿದ ತುಪ್ಪವನ್ನು ಸುರಿದನಂತೆ. ಮೂರೇ ದಿನಗಳಲ್ಲಿ ಈ ಮಡಿಕೆಯು ಇನ್ನೂ ಹೆಚ್ಚು ತುಪ್ಪವನ್ನು ಕುಡಿದು ಬಿಟ್ಟಿದ್ದಿತಂತೆ. ಹೀಗೆ ಹೊಸ ಹೊಸ ಮಡಿಕೆಗೆ ಹೋದಂತೆಲ್ಲ ತುಪ್ಪವೆಲ್ಲವೂ ಮುಗಿಯಿತಂತೆ. ಅಂತೆಯೇ ಸಾಕಷ್ಟು ತುಪ್ಪ ವನ್ನು ಕಾಂಗ್ರೆಸ್ ಮಡಿಕೆಯು ಕುಡಿದೇ ಬಿಟ್ಟಿದೆ. ಅದು ಕುಡಿಯುವದಕ್ಕೂ ಕೂಡ ಒಂದು ಮಿತಿ ಇದೆ. ಅದು ಇನ್ನು ಎಷ್ಟು ಕುಡಿದರೂ ಇನ್ನೊಂದು ಹೊಸ ಮಡಿಕೆಯಷ್ಟು ಕುಡಿಯಲಾರದು.ಆದ ಕಾರಣ ಹಳೆಯ ಮಡಿಕೆಯೇ ಲೇಸಲ್ಲವೆ ?

## ಮತದಾರ

ಓಹೋ! ತಿಂಮ್ಮೇಂದ್ರಾ! ನೀನೂ ಕಾಂಗ್ರೆಸ್ ಹುರಿಯಾಳುವಿನ ಕ್ಯಾನವಾಸಿಂಗ್ ಏಜಂಟನಂತಿರುವಿಯಲ್ಲಾ ?

## ತಿಂ ದೇವ

ತಡೆ ತಡೆ ಮಾನವಾ, ಅಷ್ಟೇಕೆ ಅವಸರ ? •ಶ್ರೀಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಹೇಳಿದಂತೆ, ನಾನೂ,ಈ ಮುಖ್ಯ ಮಾತನ್ನು ಹೇಳಲೇಬೇಕಾಗಿದೆ. ಎಲೈ ಕಂಡವರ ಮಾತು ಕೇಳುವ ಮತಿ ಇಲ್ಲದ ಮಾನವಾ! ಒಂದು ತತ್ವವನ್ನು ಮಾತ್ರ ಸದಾ ನೆನಪಿನಲ್ಲಿಡು. ನಾನು ಹೇಳಿದ ಕಾರಣ ಮಾಡಬೇಡ. ನಿನ್ನ ಕುಂಬಳಕಾಯಿಯಂತಹ ತಲೆಯಲ್ಲಿ ಒಂದು ಗುಂಜಿ ತೂಕದಷ್ಟು ಬುದ್ಧಿ ಇದೆ. ಅದನ್ನು ಉಪಯೋಗಿಸಿ ನಿನಗೆ ತಿಳಿದಂತೆ ಮಾಡು. ಹಳೆಯ ಮಡಿಕೆ ಹೆಚ್ಚು ತುಪ್ಪನನ್ನು ಕುಡಿಯುವದಿಲ್ಲವೆಂದ ಮಾತ್ರಕ್ಕೆ ಅದರಲ್ಲಿಯೇ ತುಪ್ಪ ವನ್ನು ಸದಾ ಇಡು ಎಂದು ನನ್ನ ಹೇಳಿಕೆಯಲ್ಲ. ಇಕೋ, ಇಲ್ಲಿ ಬಾ. ಈ ಹಳೆಯ ಕಾಂಗ್ರೆಸ್ ಮಡಿಕೆಯನ್ನು ಮೇಲೆತ್ತಿ ನೋಡು.

## ಮತದಾರ

(ಭಗವಾನ್ ತಿಂಮನ ಅಜ್ಞೆಯಂತೆ ಮೇಲೆತ್ತಿ, ಆಶ್ಚರ್ಯದಿಂದ) ಅಯ್ಯೋ! ಅಯ್ಯೋ !! ಇದೇನು ತಿಂಮಾತ್ಮ ? ಅನ್ಯಾಯ!!! ಈ ಮಡಿಕೆಯ ಬುಡದಲ್ಲಿ ದೊಡ್ಡ ತೂತೇ ಬಿದ್ದಿದೆಯಲ್ಲ ?

(ಮತದಾರ ಮತ್ತು ತಿಂಮ ಇಬ್ಬರೂ ಹಣೆ ಬಡಿದು ಕೊಳ್ಳುವರು. ಆಕಾಶ ವಾಣಿಯು ಕೇಳಿಬರುವದು)

ಬಟ್ಟ ಬಯಲ ನೆಲದಲಿ
ಇಟ್ಟೆ ಬಿಳೀ ಟೊಪ್ಪಿಗೆ
ಗಾಳಿ ಬೀಸಿ ಬೀಸಿತು
ಮೇಲೆ ಮೋಡ ಕವಿದಿತು
ಮಳೆಯು ಕೂಡ ಸುರಿಯಿತು
ಮೇರೆದಪ್ಪಿ ಹರಿಯಿತು
ಆದರಿನ್ನ ಟೊಪ್ಪಿಗೆ
ಹಾರಲಿಲ್ಲ ಉಳಿಯಿತು
ಅದಕೆ ಪೂಜೆ ಆಯಿತು
ಹಳೆಯ ಹೆಸರು ಇದ್ದಿತು.

ಆದರೇನು ನೀವು ಒಂದು
ಓಟು ಕೊಡದೆ ನಡೆದರೆ
ತಾಳಿಕೊಳುವ ತ್ರಾಣವದಕೆ
ಬಾರದೆಂದು ಅನಿಸಿತು

ಬಟ್ಟ ಬಯಲ ನೆಲದಲಿ
ಇಟ್ಟ ಸೊಟ್ಟ ಟೊಪ್ಪಿಗೆ

ಇತಿ ಶ್ರೀಮಚ್ಚುನಾವಣೆ ಗೀತೇ ಪಕ್ಷಿಮುಪಕ್ಷೇ ತಿಂಮಾರ್ಜುನ ಸಂವಾದೇ ಸಮಾಪ್ತಿಃ

ಶ್ರೀ ತಿಂಮಾರ್ಪಣಮಸ್ತು

---

# ಒಂದೇ ವರ್ಷದಲ್ಲಿ

## ಪಾತ್ರಗಳು

೧. ಕಿಟ್ಟು } ನೂತನ ದಂಪತಿಗಳು
೨. ಕಮ್ಲೂ }
೩. ತಿಂಮ ಕಮ್ಲೂನ ಹಿಂದೆ ಬಂದ ತಮ್ಮ.

( ಸಮಯ:— ಕಚೇರಿಯಿಂದ ಕಿಟ್ಟಿ ಕುಣಿಯುತ್ತ ಮನೆಗೆ ಓಡಿಬಂದು ಕಮ್ಲೊಡನೆ ಮಸದಣಿಯೆ ಮಾತನಾಡುತ್ತ ಕೂಡುವ ಸಮಯ.

ಸ್ಥಳ:— ಕಿಟ್ಟೂ ಕಮ್ಲೂರ ಮನೆ. ಚಿಕ್ಕದಾದರೂ ಚೊಕ್ಕಟವಾಗಿದೆ. ಒಳಗಣ ಕೋಣೆ.

ಸಂದರ್ಭ:— ಕಮ್ಲೂ ಅತ್ತೆಯವರೊಡನೆ ಕೆಲಸದಲ್ಲಿ ತೊಡಗಿದ್ದಾಳೆ. ತಿಮ್ಮ ಹೊರಬಾಗಿಲಲ್ಲಿ ಆಡುತ್ತಿದ್ದಾನೆ. ಕಿಟ್ಟಿ ಆರಾಮಕುರ್ಚಿಯಲ್ಲಿ ಒರಗಿದ್ದರೂ ಮನಸ್ಸಿಗೆ ಮಾತ್ರ ವಿರಾಮವಿಲ್ಲ. ಕೈಯಲ್ಲಿ ಪುಸ್ತಕವೇನೋ ಇದೆ. ಓದಿದ ಸಾಲನ್ನೇ ಹತ್ತತ್ತು ಬಾರಿ ಓದಿ ಬೇಸತ್ತು ವ್ಯೆಮುರಿದು ಆಕಳಿಸುವ ಸಂದರ್ಭ.)

**ಕಿಟ್ಟಿ**

ತಿಂಮಾ, ತಿಂಮಾ (ನಿರುತ್ತರ. ಗಂಟಲನ್ನೆತ್ತಿಸಿ) ಏ ತಿಂಮಾ !

**ತಿಂಮು**

(ಹೊರಗಿನಿಂದಲೇ) ಏನು ಭಾವಾ ?

**ಕಿಟ್ಟಿ**

ಇಲ್ಲಿ ಬಾರೋ ಕೊಂಚ.

**ತಿಂಮು**

(ಸಿಡುಕಿನಿಂದ) ಏಕೆ ಭಾವಾ ಬರಬೇಕು ?

**ಕಿಟ್ಟಿ**

ಹೇಳ್ತೀನೆ ಬಾರೋ ಇಲ್ಲಿ. (ರಮಿಸುವ ದನಿಯಲ್ಲಿ) ಜಾಣ ಅಲ್ವೆ ನೀನು; ಕೊಂಚ ಬಾ ಬೇಗ. ಒಂದು ಮಾತು-

**ತಿಂಮು**

ಮಾತಿಲ್ಲ ಗೀತಿಲ್ಲ, ಅದೇ ತಾನೇ ? ಆ........

**ಕಿಟ್ಟಿ**

ಅಲ್ಲವೋ ಹುಚ್ಚ. ಒಂದು ತಮಾಷೆ ಕೊಡ್ತೀನೆ, ಬಾರೋ ಬೇಗ. ಬಂದಿಯಾ ?

**ತಿಂಮ**

ನನಗೆ ಗೊತ್ತೇಳು ಭಾವಾ, ಬರೀ ಕೈ.

**ಕಿಟ್ಟು**

ಅಲ್ಲವೋ,ಹಾಗಾದರೆ ಹೇಳು ನೋಡೋಣ ನನ್ನ ಕೈಯಲ್ಲೇನಿದೆಯೋ. ಸರಿಯಾಗಿ ಹೇಳಿದರೆ ನಿನಗೇ ಕೊಟ್ಟು ಬಿಡ್ತೇನೆ.

**ತಿಂಮ**

ನಿಜವಾಗಿಯೂ ಕೊಡ್ತೀಯೇನು ಭಾವಾ ? ನನಗೇ ?

**ಕಿಟ್ಟು**

ನಿನಗೇ ಕೊಟ್ಟು ಬಿಡ್ತೇನೆ, ಹೇಳು ನೋಡುವಾ, ನನ್ನ ಮುಷ್ಟಿಯಲ್ಲೇನಿದೆಯೋ.

**ತಿಂಮ**

ಗೊತ್ತಾಯಿತು ಭಾವ, ನಿನ್ನ ಕೈಯಲ್ಲಿಂದು. ಅದು ಹೇಗಿದೆ ಕೊಂಚ ಹೇಳಿ ಬಿಡು ಹಾಗಾದರೆ, ಆಮೇಲೆ ಹೇಳ್ತೇನೆ.

**ಕಿಟ್ಟು**

ಹೇಳ್ತೀಯಾ ? ದುಂಡಾಗಿದೆ, ಮೇಲೆಲ್ಲ ಚಿತ್ರವಿದೆ, ಮಧ್ಯೆ ತೂತಿದೆ. ಹೇಳೋ ತಿಂಮಾ ನೋಡೋಣ.

**ತಿಂಮ**

ತಿಳಿಯಿತು ಬಿಡು ಭಾವಾ, ಬೀಸುವ ಕಲ್ಲು !

**ಕಿಟ್ಟು**

**(ಅಣಕಿನ ದನಿಯಲ್ಲಿ)** ಶಬಾಸ್ ! ಎಂತಹ ಜಾಣನೋ ನೀನು ? ಬೀಸುವ ಕಲ್ಲು ಮುಷ್ಟಿಯಲ್ಲಿರುತ್ತೇನೋ ತಿಂಮಾ ? ತೆಗೆದುಕೋ ಈ ಕಾಲಾಣೆ.

**ತಿಂಮ**

ಅಲ್ಲಿಂದಲೇ ಎಸಿ ಭಾವಾ, ಕ್ಯಾಚ್ ಹಿಡೀತೇನೆ.

**ಕಿಟ್ಟು**

ಇಲ್ಲಿ ಬಾರೋ, ಒಂದು ಮಾತು ಹೇಳ್ತೇನೆ.

ತಿಂಮ

(ಅನುಮಾನಿಸುತ್ತ) ಉಹುಂ, ಮೊದಲು ಕೊಟ್ರೀ ಸೈ ಮತ್ತೆ.

ಕಿಟ್ಟು

ಹಾ ಸಿಕ್ಕಿಯಾ ಕಳ್ಳ. ತೆಗೆದುಕೋ ಕಾಲಾಣೆ. (ಮೆಲುವಾಗಿ ಕಿವಿಮಾತು ಹೇಳುವಂತೆ) ಮತ್ತಗೆ ಹೋಗಿ ಕಮ್ಲೂನ್ನ ಕೊಂಚ ಬರಹೇಳು.

ತಿಂಮ

(ಗಟ್ಟಿಯಾಗಿ) ಯಾರನ್ನ ಭಾವಾ, ಕಮ್ಲೂನ್ನೇ ?

ಕಿಟ್ಟು

(ದನಿತಗ್ಗಿಸಿ) ಅಹುದು ಹೋಗೋ ಮತ್ತೆ, ಕಾಲಾಣಿ ಕಿತ್ತುಗೊಂಡಿದೀಯಲ್ಲ.

ತಿಂಮ

(ಇನ್ನೂ ಗಟ್ಟಿಯಾಗಿ) ನೀನು ಬರಹೇಳಿದಿಯೆಂದು ಹೇಳಬೇಕೇನು ಭಾವಾ ಕಮ್ಲೂಗೆ ?

ಕಿಟ್ಟು

(ಮೆಲು ದನಿಯಲ್ಲಿ) ಹೇಳು ಹೋಗೋ ಮತ್ತೆ,

ತಿಂಮ

(ಪೂರ್ತಿ ಗಟ್ಟಿಯಾಗಿ) ಯಾಕೆ ಭಾವಾ ಕಮ್ಲೂ ಬೇಕು ?

ಕಿಟ್ಟು

( ಗದರಿಸುವನು ) ಹೋಗೋ ಇರಲಿ ಹರಟೆಮಲ್ಲ.

ತಿಂಮ

(ಬಾಗಿಲಿಗೆ ಓಡಿ 'ಟಾಂ ಟಾಂ' ದನಿಯಲ್ಲಿ ಗಟ್ಟಿಯಾಗಿ ಕೂಗುವನು.) ಕ..ಮ್ಲೂ..ನ್ನ..ಭಾ..ವಾ..ಕರೀತಾರೆ..ಬ....ರ....ಬೇ..ಕಂ..ತೆ..ಕ..ರ..ದ.. ಷ್ಟ..ಕ್ಕೆ..ನ..ನ..ಗೆ..ಕಾ..ಲಾ..ಣೆ....ಕೊ..ಟ್ಟ್ರಾ..ರೆ ಢಂ....ಢಂ....ಢಂ

(ತಿಂಮ ಹೊರಗೋಡುವನು. ಕಮ್ಲೂ ಬಾಗಿಲಿಗೆ ಬಂದು ನಿಲ್ಲುವಳು.)

**ಕಿಟ್ಟು**

(ಹುಸಿನಗುವಿನಿಂದ) ಬಾ ಕಮ್ಲೂ ಒಳಗೆ.... ....ಅಯ್ಯೊ! ಇದೇನೇ ಹಿಂದೆ ಹಿಂದಕ್ಕೇ ಸರೀತಾ ಇದೀಯಾ?....ನಾಚಿಕೆ ಏನೇ ಕಮ್ಲೂ? ಇನ್ನೂ ಹೊಸಬಳಂತೆ ಮಾಡ್ತಾ ಇದ್ದೀಯಲ್ಲವೆ, ಈ ಮನೆಗೆ ಬಂದು ಇಪ್ಪತ್ನಾಲ್ಕು ಗಂಟೆಗಳು ಆದ್ರೂನೂವೆ? ಅಯ್ಯೊ ಇದೇನೇ ಮಾತು ಸಹ ಆಡೋಲ್ಲವಲ್ಲೇ? ಮೂಕಿಯೇನೇ ಕಮ್ಲೂ ನೀನು! ಏನಾದರೂ ಎರಡು ಮಾತನಾಡೇ.

**ಕಮ್ಲೂ**

(ಬಹುಮೆತ್ತಗೆ) ಅತ್ತೆಯವರು........

**ಕಿಟ್ಟು**

ಹೂ; ಏನೇ ಅತ್ತೆಯವರಿಗೆ? ಇದ್ದಾರೆ ಒಳಗೆ.

**ಕಮ್ಲೂ**

ಅತ್ತೆಯವರೊಬ್ಬರೇ ಬೀಸ್ತಾ ಇದ್ದಾರೆ.

**ಕಿಟ್ಟು**

ಅಯ್ಯೋ,ಅಯ್ಯೋ! ಎಷ್ಟು ಮರ್ಯಾದೆ ಅತ್ತೆಯವರಿಗೆ!! ಅತ್ತೆಯವರಂತೆ ಅತ್ತೆಯವರು!!! ಅಲ್ಲವೆ ಪಾಪ, ನಿನಗಿರೋದು ಒಬ್ಬಳೇ ಅತ್ತೆ. ಸಾಕು ಕುಳಿತುಕೊಳ್ಳೇ ಕುಳಿತುಕೋ (ಕೈಹಿಡಿದು ಎಳೆಯುವನು)

**ಕಮ್ಲೂ**

ಬೇಡ ಕೈಬಿಡಿ. ನಾನು ಹೋಗ್ಬೇಕೂ ಅಂದ್ರೆ........

**ಕಿಟ್ಟು**

ಬಿಡ್ತೇನೆಯೇ ಇರಲಿ. ಹಾಗನಕೂಡದೇ ಕೈಹಿಡಿದವನನ್ನು ಕೈ ಬಿಡು ಯೆಂದು. ಎಷ್ಟು ಹೊತ್ತು ಹಾಗೆಯೇ ನಿಂತಿರೋದು ಅಂತ. ಕೊಂಚ ಕುಳಿತುಕೋ ಕುರ್ಚಿಯ ಮೇಲೆ.

**ಕಮ್ಲೂ**

ಥೂ! ಬೇಡ ತೆಗೀರಿ. ಕುರ್ಚಿಯ ಮೇಲೆ ನಿಮ್ಮೆದುರಿನಲ್ಲಿ ಸರಿಸರಿ ಕುಳಿತುಗೊಳ್ಳೋದಾ?

**ಕಿಟ್ಟು**

ಏನೇನನ್ನೋ ಕಲಿಸಿ ಕೊಟ್ಟಿದ್ದಾರಲ್ಲವೆ ನಿಮ್ಮಮ್ಮ ಅಪ್ಪ? ಸಾಯಂಕಾಲ ವಾಯಿತು, ಹಾಗೇ ತಿರುಗಾಡಿಕೊಂಡಾದರೂ ಬರೋಣ; ಜಡೆ ಹಾಕಿಕೊಂಡು ರೆಡಿ ಆಗು.

**ಕಮ್ಲೂ**

ಅಯ್ಯಯ್ಯೊ ! ಬೇಡ ಮಹಾರಾಯರೇ.

**ಕಿಟ್ಟು**

ಅದೇಕೇ ಭಯಪಡ್ತಾ ಇದ್ದೀಯಾ ? ಬೀಚಿಗೆ ಹೋಗಿಬಿಟ್ಟುಬರೋಣ ಬಾರೇ ಕಮ್ಲೂ.

**ಕಮ್ಲೂ**

ನಿಮ್ಮ ಬೀಚುಬೇಡ ಗೀಚುಬೇಡ. ಕೈ ಬಿಡಿ, ನಾನು ಒಳಗೆ ಹೋಗ್ತೇನೆ. ಅತ್ತೆಯವರೂ........

**ಕಿಟ್ಟು**

ಅಯ್ಯೊ ನಿನ್ನ ಅತ್ತೆಯವರು ಚಿನ್ನ ಆಗಾ. ಬೀಚು ಏಕೆ ಬೇಡವೇ. ನೀನು ಎಂದಾದರೂ ಬೀಚು ನೋಡಿದೀಯೇನೇ ?

**ಕಮ್ಲೂ**

ನೋಡಿದ್ದೇನೆ ಆಗಲೆ, ಪಾರ್ಥಸಾರಥಿ ಗುಡಿಗೆ ಹೋದಾಗ.

**ಕಿಟ್ಟು**

ಬೀಚು ಚೆನ್ನಾಗಿಲ್ವೇನೇ ಕಮ್ಲೂ ?

**ಕಮ್ಲೂ**

ಏನು ಚೆನ್ನಾಗಿದೆಯೋ ಹಾಳು, ನನಗೆ ಬೇಡ ಮಾರಾಯ್ರೆ ನಿಮ್ಮ ಬೀಚು. ಬರೀ ಗಾಳಿ ಗಂಡಸರು ಎಲ್ಲಿ ನೋಡಿದರೂ.

**ಕಿಟ್ಟು**

ಅಯ್ಯೊ ಮಹರಾಯಿತಿ, ಗಾಳಿ ಗಂಡಸರು ಇಲ್ಲದ ಬೀಚನ್ನು ಎಲ್ಲಿಂದ ತರಬೇಕೇ ನಾನು? ಆಯಿತು, ಸಿನೇಮಾಕ್ಕಾದರೂ ಹೋಗೋಣ ನಡೆ, ಒಳ್ಳೆಯ ಹಿಂದೀ ಚಿತ್ರ ಬಂದಿದೆಯಂತೆ.

**ಕಮ್ಲೂ**

ಸಾಕು ಬಿಡಿ ಅಂದ್ರೆ. ಹೆಂಗಸರೆಲ್ಲ ನೋಡೋದಾ ಅಂತಹವನ್ನೆಲ್ಲ ? ಅದರಲ್ಲೇನಿದೆ, ದೇವ್ರೇ ದಿಂದ್ರೇ, ಮತ್ತೆ ಅದೇ........

**ಕಿಟ್ಟು**

ಏನೇ ಮತ್ತೆ ಅವೇ ಅಂದರೆ ? ನನ್ನಂತಹ ಒಬ್ಬ ಸುಶಿಕ್ಷಿತ ಪ್ರೇಮ ಪೀಡಿತ ತರುಣ, ನಿನ್ನಂತಹ ಒಬ್ಬ ನವಯುವ್ವನಭರಿತಳಾದ ತರುಣಿ........

**ಕಮ್ಲೂ**

ಥೂ, ಸಾಕು ಬಿಡಿ ಅಂದ್ರೆ. ಅಂತಹ ಸುಟ್ಟು ಸುಡುಗಾಡು ಕತೆಯೆಲ್ಲ ಹೇಳಬೇಡಿ ನನ್ನ ಮುಂದೆ.

**ಕಿಟ್ಟು**

ಇದೇನೇ ಕಮ್ಲೂ ಕಿವಿಮುಚ್ಚಿಗೊಳ್ತಿದೀಯಾ ? ಸೀನೇಮಾ ಬೇಡವಾದರೆ ಬಿಟ್ಟುಬಿಡು. ಕಡ್ಡಾಯಬೇಡ; ಹೊಸದಾಗಿ ಬಂದಿದೆ ಒಂದು ಐಸ್ ಕ್ರೀಮ್ ಐಲಂಡ್. ಅಲ್ಲಿಗೆ ಹೋಗಿ ಕೊಂಚ ಐಸ್ ಕ್ರೀಮಾದರೂ ತಿಂದು ಬರೋಣವೇ?

**ಕಮ್ಲೂ**

ಏನು ಅವೆಲ್ಲ ಹಾಳು ! ಅದನ್ನೇಕೆ ತಿನಬೇಕಂತೆ ಗಂಡಸರಂತೆ ?

**ಕಿಟ್ಟು**

ಐಸ್ ಕ್ರೀಮು ತಿನ್ನೋಕೆ ಗಂಡಸರೇನು ಹೆಂಗಸರೇನೇ ? ಎಂದಾದರೂ ತಿಂದಿದೀಯಾ ಐಸ್ ಕ್ರೀಮು ? ಹೇಗಿರುತ್ತೇ ಗೊತ್ತೇ ಅದು ?

**ಕಮ್ಲೂ**

ತಿಂದಿದೀನೇಳಿ ಒಂದು ಬಾರಿ, ಬಹಳ ಚಿಕ್ಕವಳಿದ್ದಾಗ.

**ಕಿಟ್ಟು**

ಚೆನ್ನಾಗಿರೋಲ್ಲವೇನೇ ಕಮ್ಲೂ ಐಸ್ ಕ್ರೀಮು ?

**ಕಮ್ಲೂ**

ಏನು ಚೆನ್ನಾಗಿರುತ್ತೆ ಹಾಳು, ಸಕ್ಕರಿಗಿಷ್ಟು ಚಳಿ ಬೆರಿಸಿದಂತಿರುತ್ತೆ; ಅಷ್ಟೇ. ಹಲ್ಲಿಗೆಲ್ಲ ಅಮೃತಾಂಜನ ಹಚ್ಚಿದಂತಾಗುತ್ತೆ. ಅದೇ ತಾನೇ ನಿಮ್ಮ ಐಸ್ ಕ್ರೀಮು !

**ಕಿಟ್ಟು**

ಬಹಳ ಚೆನ್ನಾಗಿದೆ ನಿನ್ನ ಐಸ್‌ಕ್ರೀಮಿನ ವರ್ಣನೆ. ಯಾವುದೂ ಬೇಡ ಹಾಗಾದರೆ, ಮೊನ್ನೆ ತಾನೆ ಮಂತ್ರಿಗಳು ಬಂದು ಉದ್ಘಾಟನೆ ಮಾಡಿದ್ದಾರೆ, ಆ ಪಾರ್ಕಿಗೆ ಹೋಗೋಣ ನಡೆ.

**ಕಮ್ಲೂ**

ಬೇಡ್ರಿ ಮಾರಾಯ್ರಿ ದಮ್ಮಯ್ಯ. ನನಗೆ ಪಾರ್ಕುಗೀರ್ಕು ಒಂದೂ ಹಿಡಿಸೊಲ್ಲ.

**ಕಿಟ್ಟು**

ಅಲ್ಲವೇ, ಕೊಂಚ ಕೇಳೇ ನನ್ನ ಮಾತು. ನಮ್ಮೂರ ಪಾರ್ಕಂದ್ರೆ ಏನು ತಿಳಿದಿದೀಯಾ? ಎಷ್ಟು ತರಹದ ಗಿಡಗಳಿವೆ ಬಳ್ಳಿಗಳಿವೆ, ಗೊತ್ತೇ ನಿನಗೆ?

**ಕಮ್ಲೂ**

ಏನು ಮಾಡೋದು ಗಿಡಗಂಟಿನೆಲ್ಲ ತೆಕ್ಕೊಂಡೂ ಅಂತ. ಅದನ್ನ ನೋಡಿದರೆ ಏನು ಬರುತ್ತೋ ಮಹಾ! ಹಿತ್ತಲಲ್ಲೇ ಬೇಕಾದಷ್ಟಿವೆ ಯಲ್ಲಾ—ತುಳಸಿಗಿಡ, ಪಡುವಲಬಳ್ಳಿ. ಇನ್ನೂ ಬೇಕಾದರೆ ಬಚ್ಚಲ ಮೋರಿಗೆ ಹಾಕಬಹುದು ರಾಜಗಿರಿ, ಮೆಂತೆ, ಗೋಳಿ ಸೊಪ್ಪುಗಳ್ನೆಲ್ಲಾ.

**ಕಿಟ್ಟು**

ಬಹಳ ಚೆನ್ನಾಗಿದೆ ನಿನ್ನ ಪಾರ್ಕಿನ ಕಲ್ಪನೆ. ಅಲ್ಲವೇ, ಬಚ್ಚಲ ಬಳಿ ಬೆಳೆದ ಪಲ್ಲೆ ನೋಡಿಲ್ಲವೆಂದೇನೇ ಎಲ್ಲರೂ ಪಾರ್ಕಿಗೆ ಬರುವದು? ಅಲ್ಲಿ ಸುಂದರವಾದ ಕಾರಂಜಿ ಸಹ ಇದೆಯೋ, ಕಾರಂಜಿ.

**ಕಮ್ಲೂ**

ಏನು ಹಾಗಂದ್ರೆ ಅಂತ.

**ಕಿಟ್ಟು**

ಹಾ, ಹಾಗೆ ಬಾ ಮಹಾರಾಯತಿ. ಕಾರಂಜಿ ನೋಡುವದಕ್ಕಾದರೂ ಹೋಗೋಣ ನಡೆ ಪಾರ್ಕಿಗೆ, ತೋರಿಸುತ್ತೇನೆ.

**ಕಮ್ಮು**

ಕೊಂಚ ಹೇಳಿ ನೋಡೋಣ. ಹೇಗಿರುತ್ತೋ ಅದು. ಸಿಂಹದಂತೆ ಅದಕ್ಕೇನು ಕತ್ತಿನ ಮೇಲೆ ಕೇಶರಾಶಿ ಇರುತ್ತೆಯೋ ಅಥವಾ ಒಂಟೆಯಂತೆ ಬೆನ್ನಮೇಲೆ ಡುಬ್ಬ ಇದೆಯೋ, ಆಕಳಂತೆ ಅದು ಹುಲ್ಲು ಮೇಯುತ್ತೆಯೋ ಅಥವಾ ಅದಕ್ಕೆ ಕೋತಿಗಿದ್ದಂತೆ ಬಾಲ ಇದೆಯೋ........

**ಕಿಟ್ಟು**

ಗ್ರಹಚಾರ ! ಹುಚ್ಚೀ ಹುಚ್ಚೀ, ಕಾರಂಜಿ ಎಂಬುದು ಮೃಗ ಅಲ್ಲವೇ. ನೀರು ಚಿಮ್ಮುತ್ತೆ ನೀರು, ತೂಬಿನಿಂದ.

**ಕಮ್ಮು**

(ನಗುತ್ತ) ಇದಕ್ಕೇನಾ ನೀವು ಕಾರಂಜಿ ಅನ್ನೋದು? ತಿಳಿಯಿತು ಬಿಡಿ. ಒಂದು ಸಾವಿರ ಬಾರಿ ನೋಡಿದ್ದೇನೆ ಇದನ್ನು, ಸಾವಿರ ಬಾರಿ.

**ಕಿಟ್ಟು**

ಯಾವ ಊರಲ್ಲಿಯೋ ಕಮ್ಮು ನೋಡಿದ್ದು ? ಬೆಂಗಳೂರಿಗೆ ಹೋಗಿದ್ದಿಯಾ, ಅಥವಾ ಮೈಸೂರಿಗೆ ಹೋಗಿದ್ದಿಯಾ ?..

**ಕಮ್ಮು**

ಚೆನ್ನಾಯಿತು ಕಾರಂಜಿ ನೀರು ಬರೋದು ನೋಡೋಕೆ ಯಾರಾದರೂ ಬೆಂಗಳೂರು ಮೈಸೂರಿಗೇ ಹೋಗಬೇಕು ?

**ಕಿಟ್ಟು**

ಹಾಗಾದರೆ ಎಲ್ಲಿಯೋ ನೀನು ನೋಡಿದ್ದು ಕಮ್ಮೂ ?

**ಕಮ್ಮು**

ಎಲ್ಲಿಯಾದರೂ ಏಕೆ, ನಮ್ಮೂರಲ್ಲಿಯೇ ನಮ್ಮ ಮನೆಯಲ್ಲಿಯೇ ನಿತ್ಯವೂ ನೋಡುತ್ತಿದ್ದೆನಲ್ಲ !

**ಕಿಟ್ಟು**

ನಿಮ್ಮ ಮನೆಯಲ್ಲಿ !

**ಕಮ್ಮು**

ಒಂದಲ್ಲದೆ ಮೂರು ಇದ್ದವು, ಸೋರುವ ಕೋಡಗಳು. ಅಪ್ಪಗೆ ಅದನ್ನು ರಿಪೇರಿ ಮಾಡಿಸೆಂದು ಹೇಳಿ ಹೇಳಿ ಬೇಜಾರಾಗಿ ನಮ್ಮಮ್ಮ ಸುಮ್ಮನಾಗಿ

ಬಿಟ್ಟರು. ಅದೇ ಕೊಡಗಳಿಂದಲೇ ನಾನು ನೀರು ತಂದದ್ದು. ನಾನು ನೋಡಿಲ್ಲವೇ ಕಾರಂಜಿ, ಹೋಗಿ ಬನ್ನಿ ನೀವು. ನಾನು ಅತ್ತೆಯವರೊಟ್ಟಿಗೆ........

**ಕಿಟ್ಟು**

ಏನು, ಕನವರಿಸುರಿ ಮಾಡ್ತಾ ಕೂತ್ತಿದೀಯಾ ? ಪೆಚ್ಚೇ ಪೆಚ್ಚೇ. ತಿಳಿದಂತಾಯಿತು, ನನ್ನೊಟ್ಟಿಗೆ ಬರೋಕೇ ನಿನಗ ಸಂಕೋಚ ತಾನೇ ? ನೀನೊಬ್ಬಳೇ ಆದರೂ ಹೋಗಿ ಬಾ ಹೋಗು ಲೇಡೀಸ್ ಕ್ಲಬ್ಬಿಗೆ.

**ಕಮ್ಮು**

ಒಬ್ಬಳೇ ಹೋಗೋದಾ ! ಬಹಳ ಚೆನ್ನಾಗಿ ಹೇಳಿದಿರಿ ಎಲ್ಲಿಯಾದರೂ ಅವಮಾನ. ಅಲ್ಲದೆ ಕರೀದೇ ಮಾಡದೆ ಹೋಗೋದೇನಾ ? ಹೋಗೋಕಾದರೂ ಏನಿದೆ ಅಲ್ಲಿ ಅಂತಾ. ಉರುಟಣಿಯೋ, ಉತ್ಸವವೇ, ವೀಳ್ಯವೇ, ಬಾಗಣವೇ........

**ಕಿಟ್ಟು**

(ನಗು) ಲೇಡೀಸ್ ಕ್ಲಬ್ಬಿನಲ್ಲಿ ಯಾರು ಯಾರಿಗೇ ಉರುಟಣಿ ಮಾಡಬೇಕು ? ಬೇಡ ಬಿಡು, ಏನೂ ಬೇಡ. ಇನ್ನೂ ಹಾಗೆಯೇ ನಿಂತಿದೀಯಲ್ಲವೇ, ಕೊಂಚ ಕುಳಿತುಕೋ........

**ಕಮ್ಮು**

ನೀವು ಕೈಬಿಡಿ ಅಂದ್ರೆ. ಬೇಗ ಬಿಡಿ, ಆ ಮೇಲೆ ಅತ್ತೆಯವರೂ........

**ಕಿಟ್ಟು**

ಬರೋಲ್ಲವೇ ಈಗ. ಕುಳಿತುಕೊಳ್ಳೇ ಅಂದ್ರೆ........ಹೂ....ಹಾಗೇ....

**ಕಮ್ಮು**

ಕುಳಿತು ಆಯಿತಲ್ಲ, ನಾನು ಬರ್ತೀನೆ ಇನ್ನೂ.

**ಕಿಟ್ಟು**

ಛೇ ಛೇ ! ಈಗಲೇ ಎದ್ದರೆ ಹೇಗೆ ? ಒಂದು ಹಾಡು ಹೇಳಿಬಿಟ್ಟು ಹೋಗಬೇಕು ಈಗ. ಇಲ್ಲವಾದರೆ ಬಿಡೋಲ್ಲ ನೋಡು ಕಮ್ಮೂ.

**ಕಮ್ಮು**

ನನಗೆ ಬರೋಲ್ಲ ಮಹರಾಯರೆ- ಹಾಡು, ಗೀಡು ಎಲ್ಲ.

**ಕಿಟ್ಟು**

(ಸಂಕೋಚದಿಂದ) ಬರೋಲ್ಲ? ನಿಮ್ಮ ತಂದೆಯವರ ಮೇಲೆ ದಾವ ಹಾಕಿ ಬಿಟ್ಟೇನು ಆ ಮೇಲೆ, ಮೋಸದಿಂದ ಮಾಡಿದ್ದಾರೆಂದು; ಮದುವೆಯ ಮುಂದೆ ಅವರು ಬರೆದ ಕಾಗದಗಳು ಇನ್ನೂ ಇವೆ ನನ್ನ ಬಳಿ,ಗೊತ್ತೆ? ಅವರೇ ಸ್ವತಃ ಬರೆದಿದ್ದಾರೆ " ನನ್ನ ಮಗಳಿಗೆ ಸಂಗೀತ ಕಲಿಸುತ್ತಿದ್ದೇನೆ, ಈಗಾಗಲೇ ಲಂಬೋದರ ಲಕುಮಿಕರದವರೆಗೂ ಬಂದಿದ್ದಾಳೆ " ಎಂದು. ನಿನಗೆ ಸಂಗೀತ ಕಲಿಸಲಿಲ್ಲವೇನೇ ಹಾಗಾದರೆ ?

**ಕಮ್ಮು**

ಆಹುದು ಕಲಿಸಿದರು.

**ಕಿಟ್ಟು**

ಮತ್ತೆ ?

**ಕಮ್ಮು**

ನನಗೆ ಬರಲಿಲ್ಲ, ಅಷ್ಟೇ.

**ಕಿಟ್ಟು**

ಚೌಡಯ್ಯನವರ ಪಿಟೀಲು ಕೇಳಿದೆ, ಆದರೆ ಅವರು ಕೊಡಲಿಲ್ಲ ಅಂದರು ಎಂದಂತಿದೆಯಲ್ಲವೇ ಇದು? ಅದೆಲ್ಲ ನನಗೆ ಬೇಡ. ಅಂದು ಉರುಟಣೆಯಲ್ಲಿ ಹಾಡಿದೆಯಲ್ಲ ಅದನ್ನು ಹೇಳು.

**ಕಮ್ಮು**

ಅದು ಕೂಡಾ ಪೂರ್ತಿ ಬರೋಲ್ಲ ಕಣ್ರೀ.

**ಕಿಟ್ಟು**

ಹಾಗಾದರೆ ಆಗ ಹ್ಯಾಗೆ ಹೇಗೇ ಹೇಳಿದೆ.

**ಕಮ್ಮು**

ಹಿಂದೆ ನನ್ನ ತಂಗಿ ಹೇಳ್ತಾ ಇದ್ದಳು. ನಾನು ಹಾಗೇ..

**ಕಿಟ್ಟು**

(ನಡುವೆ ಬಾಯಿ ಹಾಕಿ) ಓಹೋ ಸರಿ. ಸಿನೇಮಾದಾಗಿನ ಹಿರೋಯಿನ್ನಿಗೆ ಬ್ಯಾಕ್‌ಪ್ಲೇ ಕೊಟ್ಟಂತಾಗಿದೆ ಅನ್ನು. ಆಯಿತು. ಬಂದಷ್ಟನ್ನೇ ಹೇಳಿ ಬಿಡು.

ಕಮ್ಲೂ

ಒಂದೇ ಸಾಲು ಮಾತ್ರ ಕಣ್ರೀ ಬರೋದು. ಆ ಪದ್ಯದಲ್ಲಿ.

ಕಿಟ್ಟು

ಅಷ್ಟೇ ಹೇಳು ಸಾಕು. ಹೂ........ಹೂ ಹೇಳು........ ಹೇಳು ಮತ್ತೆ ಹೂ.

ಕಮ್ಲು

(ನಾಚಿ) ಬೇಡ ಬಿಡಿ, ನಾನು ಒಳಗೆ ಹೋಗ್ಬೇಕು.

ಕಿಟ್ಟು

ಕೊಂಚ ಹೇಳಿಬಿಟ್ಟು ಹೋಗು ಕಮ್ಲೂ ಹೂ........ ಬೇಗ ಹೇಳು ಮತ್ತೆ....ಹೇಳೇ ಜಾಗ್ರತೆಯಾಗಿ,........ಯಾರೂ ಇಲ್ಲ........ ಅವತ್ತು ಅಷ್ಟು ಜನರೆದುರಿನಲ್ಲಿ ಹೇಳಲಿಲ್ಲವೇ ? ಹೂ....ಹೂ....ಬೇಗ ಹೇಳಿಬಿಡು.

ಕಮ್ಲು

(ಸುಸ್ಪಷ್ಟ ಅಪಸ್ವರದಲ್ಲಿ) ಯನ ಪ್ರಾಣನಾಥನಾ ಪಾದಾರವಿಂದದಿ ನಾನು........

ತಿಂಮ

(ಕಿಟಕಿಯಿಂದ ಇಣಿಕಿ ಮುಂದುವರಿಸುವನು) ಘನ ವೀಳ್ಯೆವನು ಇಕ್ಕಿ ಕೈಮುಗಿಯುವೇ.

ಕಮ್ಲು

(ಬೆಚ್ಚಿ ಬಿದ್ದು) ಅಯ್ಯಯ್ಯೋ, ತಿಂಮ !

ಕಿಟ್ಟು

(ಸಿಟ್ಟಿನಿಂದ) ತಿಂಮಾ

ತಿಂಮ

ಏನು ಭಾವಾ ?

ಕಿಟ್ಟು

ನಡೆಯೋ ಹೊರಗೆ, ಆಡಿಕೊಂಡು ಬಾ ಇನ್ನೂ ಕೊಂಚ.

ತಿಂಮ

ಏನಾಟ ಬಿಡು, ಭಾವಾ, ಬೇಜಾರಾಯ್ತು.

**ಕಿಟ್ಟು**

ಒಳಗೆ ಹೋಗಿ ಓತ್ತಾ ಆದರೂ ಕುಳಿತುಕೊಳ್ಳೋ.

**ತಿಂಮು**

ಪುಸ್ತಕ ತರಲಿಲ್ಲ ಭಾವಾ ನಾನು ಊರಿಂದ.

**ಕಿಟ್ಟು**

ಪಕ್ಕದ ರೂಮಿನಲ್ಲಿ ರೇಡಿಯೋನಾದರೂ ಕೇಳು ಹೋಗು.

**ತಿಂಮು**

ಅದೇಕೆ ಭಾವಾ, ಗೊಡರ್ ಗೊಡರ್ ಅನ್ನುತ್ತೆ.

**ಕಿಟ್ಟು**

ತೆಕ್ಕೋ ಎರಡಾಣೆ. ಅಂಗಡಿಗೆ ಹೋಗಿ ಪೆಪ್ಪರಮಿಂಟಾದರೂ ತಂದು ತಿನ್ನು.

**ತಿಂಮು**

ಬೇಡ ಭಾವಾ ಪೆಪ್ಪರಮಿಂಟು. ಕೆಮ್ಮು ಆಗುತ್ತಂತೆ ಅದರಿಂದ, ದೊಡ್ಡ ಭಾವ ಹೇಳ್ತಾಯಿದ್ರು, ಕಾಸು ಕೇಳಿದಾಗೆಲ್ಲ.

**ಕಿಟ್ಟು**

ಹೋಗೋ, ಈ ಎಂಟಾಣೆ ತೆಕ್ಕೊಂಡು ಸಿನೇಮಾನಾದರೂ ನೋಡಿ ಬಾ ನಡೆ.

**ತಿಂಮು**

ಕಣ್ಣು ಕೆಡುತ್ತದಂತಲ್ಲ ಭಾವಾ ಚಿಕ್ಕವರಿಗೆ ಅದರಿಂದ, ಸಣ್ಣ ಭಾವ ಹೇಳ್ತಾ ಇದ್ರು.

**ಕಿಟ್ಟು**

(ಬೇಸರದಿಂದ) ಹಾಗಾದರೆ ಏನೋ ತಿಂಮಾ ಮಾಡ್ತೀಯಾ ?

**ತಿಂಮು**

ಇಲ್ಲೇ ಕುಳಿತುಗೊಂಡು ನೋಡ್ತೀನಿ ಭಾವಾ, ನಿನ್ನ, ಅಕ್ಕನ್ನ. (ಆಶ್ಚರ್ಯದಿಂದ) ಅಯ್ಯೊ ! ಇದೇನು ಭಾವಾ, ಅಕ್ಕ ಮೆತ್ತಗೆ ಜಾರಿಕೊಂಡು ಬಿಟ್ಟಿದಾಳಲ್ಲ ಒಳಕ್ಕೆ ! ಭಾವಾ.

**ಕಿಟ್ಟು**

ಇನ್ನೂ ಏನೋ ತಿಂಮಾ ?

**ತಿಂಮ**

ಆಟಕ್ಕೆ ಹೋಗಲೇನು ಭಾವಾ ಹೊರಗೆ ?

**ಕಿಟ್ಟು**

ಅಗತ್ಯ ಹೋಗಯ್ಯಾ, ನಿನಗಾರು ಬೇಡ ಎಂದರು.

೨

( ಸಮಯ:— ಇಡೀ ದಿನವೆಲ್ಲ ಕಚೇರಿಯಲ್ಲಿ ದುಡಿದು ಕತ್ತೆಯಂತೆ ಕಾಗದ ಹೊರೆ ಹೊತ್ತು ಕಿಟ್ಟು ಅನಿವಾರ್ಯವಾಗಿ ಮನೆಗೆ ಹಿಂತಿರುಗುವ ಸಮಯ.

ಸ್ಥಳ:— ಕಮ್ಲೂ ಕಿಟ್ಟೂರ ಮನೆ. ತೊಟ್ಟಿಲು ಬಟ್ಟಲು ಅರಿವೆ ಅಂಜಡಿ ಆಡಾವುಡಿ ಮನೆತುಂಬ ಬಿದ್ದಿವೆ.

ಸಂದರ್ಭ:— ಹೊರ ಬಾಗಿಲು ಹಾಕಿದೆ. ಮುಂದಿನ ಕೋಣೆಯಲ್ಲಿ ತಿಂಮ ಆಡುತ್ತ ಕುಳಿತಿದ್ದಾನೆ. ರಸ್ತೆಯಲ್ಲಿ ನಿಂತು ಕಿಟ್ಟು ನೂರುಬಾರಿ ಕೂಗಿದರೂ ಬಾಗಿಲು ಮಾತ್ರ ತೆಗೆದಿಲ್ಲ. )

**ಕಿಟ್ಟು**

(ಹೊರಗಿನಿಂದ) ಕಮ್ಲೂ, ಏ ಕಮ್ಲೂ........ಏ ಕಮ್ಲೂ (ಕೂಗಿ ಕೂಗಿ ಬೇಸತ್ತು) ಏ ಕಮ್ಲೂ, ಕಮ್ಲೂ....ಕಮ್ಲೂ........ತಿಂಮಾ.

**ತಿಂಮ**

(ತಕ್ಷಣವೇ) ಏನು ಭಾವಾ ?

**ಕಿಟ್ಟು**

(ಆಶ್ಚರ್ಯದಿಂದ) ಇಲ್ಲಿಯೋ ಇದೀಯಲ್ಲೋ,ಬಾಗಿಲ ತೆಗೇ ಕೂಡದೇ!

**ತಿಂಮ**

(ತೆಗೆದ ಶಬ್ದ) ತೆಗೆದೇನೀ ಭಾವಾ, ನೋಡು ಕದವನ್ನು.

**ಕಿಟ್ಟು**

ಅಲ್ಲವೋ ತಿಂಮಾ, ಅರ್ಧಗಂಟೆಯಿಂದ ' ಕಮ್ಲೂ ' ' ಕಮ್ಲೂ ' ಅಂತ ಗಂಟಲ ಹರಿದುಕೊಂಡೆನಲ್ಲವೋ. ತೆಗೇಲಿಲ್ಲ ?

**ತಿಂಮ**

ನೀನು ಕಮ್ಲೂನ್ನಲ್ಲವೇನು ಭಾವಾ ಕರೆದದ್ದು ?

ಕಿಟ್ಟು

ನಿನ್ನ ತಲೆ. ( ಒಳಗಿನಿಂದ ಮಗುವಿನ ಅಳು ಕೇಳಿಬರುತ್ತದೆ.) ತಿಂಮಾ.

ತಿಂಮು

ಏನು ಭಾವಾ ?

ಕಿಟ್ಟು

ಕಿವಿ ಕೇಳಲ್ವೇನೋ ನಿನಗೆ ?

ತಿಂಮು

ಏಕೆ ಭಾವಾ, ಕೇಳ್ತಾನೇಯಿದೆಯಲ್ಲ ನಿನ್ನ ಮಾತು.

ಕಿಟ್ಟು

ಅಳ್ತಾ ಇದೆಯಲ್ಲವೋ ಮಗು ಒಂದೇಸವನೆ.

ತಿಂಮು

ಅಹುದು ಭಾವಾ, ಅಳ್ತಾ ಇದೆ

ಕಿಟ್ಟು

(ಕೋಪದಿಂದ) ಹೋಗೋ ಮಂಕೆ ! ಮಾತಿಗೆ ಮಾತು ಆಡ್ತಾ ಕೂಡ ಬೇಡ. ಮಗುವನ್ನೆತ್ತಿಕೊಂಡು ಹಾಗೇ ಹೊರಗೆ ಹೋಗಿ ಬಾ.

( ಮಗುವಿನೊಂದಿಗೆ ತಿಂಮುನ ನಿರ್ಗಮನ. ಒಳಗಣ ಮನೆಯಲ್ಲಿ ಕಮ್ಮು ಗುಯ್ಗುಟ್ಟುತ್ತಿದ್ದಾಳೆ).

ಕಮ್ಮು

( ಪಂಚಮನ್ನೆತ್ತಿಸಿ ಹಾಡುವಳು ).

ತುಮನೇ ಮುಜಕೋ ಪ್ರೇಮ ಸಿಕಾಯೋ

ಕಿಟ್ಟು

( ಅಣಕಿಪ ದನಿಯಿಂದ ಅದೇ ದಾಟಿಯಲ್ಲಿ )

ಮೈನೇ ತುಜಕೋ ಬೇವಿನ ಕಾಯಿ.

(ಜುಗುಪ್ಸೆಯಿಂದ) ಏನೇ ಕಮ್ಮು ಇದು ಅನ್ಯಾಯ ! ಕೂಸು ಅಳ್ತಾ ಇದ್ರೂನೂವೆ ನಿನ್ನ ಸಂಗೀತದ ರಂಗಿನಲ್ಲಿಯೇ ನೀನಿದ್ದೀಯಲ್ಲವೆ ? ಮಗು ಅತ್ತರೂ ಸಹ ಕೇಳಲ್ವೇನೇ ನಿನಗೆ ? ಏನು ದರಿದ್ರಹಾಡೇ ಅದು ! ಕೇಳಲ್ವೇನೇ ಕಿವಿ ?

**ಕಮ್ಮು**

ಕೇಳ್ತಾನೆ ಇದ್ದೀನಿ ಆಗಿನಿಂದಲೂ. ನೀವು ಮಾತ್ರ ಆಫೀಸಿಗೆ ಹೋಗಿ ಸುಖವಾಗಿ ಕುಳಿತುಬಿಡಿ, ಪಂಖಾದ ಬುಡದಲ್ಲಿ. ಮಗೂನ್ನ ಎತ್ತಲಿಕ್ಕೆ ಹೇಳಿ; ಬೇಕಾದರೆ ಇದ್ದಾಳಲ್ಲ ನಿಮ್ಮಮ್ಮ.

**ಕಿಟ್ಟು**

ಅಯ್ಯೊ ಅಯ್ಯೊ ! ಏನೇ ಉದ್ಧಟತನ ನಿಂದೂ. ' ಏಕವಚನ ಸುರು ಮಾಡಿಬಿಟ್ಟೆಯಾ ಆಗಲೆ, ನನ್ನ ತಾಯಿಯವರಿಗೆ ! ಬಂದ ಹೊಸದಾಗಿ ' ನನ್ನ ಅತ್ತೆಯವರು ನನ್ನ ಅತ್ತೆಯವರು ' ಅಂದ ನೀನು ಈಗಾಗಲೆ ' ನಿಮ್ಮ ತಾಯಿ ಇದ್ದಾಳೆ ' ಅಂತಾ ಇದೀಯಲ್ಲವೆ ?........

**ಕಮ್ಮು**

ಚೆನ್ನಾಗಿದೆ ಗ್ರಹಚಾರ, ಕಡೇ ವರೆಗೂ ಹಾಗೆಯೇ ಇರೋಕೆ ಹೇಳ್ತೀರಾ ಏನು ಗತಿ ! ನಾನೇನು ಚಿಕ್ಕವಳೇ ಪುಟ್ಟವಳೇ, ನಾನೂ ಈ ಮನೆಗೆ ಬಂದು ಮುನ್ನೂರಾ ಅರವತ್ತೈದು ದಿನಗಳಾದವು ನಾಳಿಗೆ........

**ಕಿಟ್ಟು**

ಅಹುದು ಮಹಾರಾಯುತಿ ಇನ್ನೂ ದೇವ್ರೇ ಅಂತ ಒಂದು ವರ್ಷ ಆಗುತ್ತೆ ನಾಳಿಗೆ. ನಿನ್ನದೂ ಈ ಓಟು ಕೇಳುವವರ ಜಾತಿ ಬಿಡು. ಆರಿಸಿ ಬರುವಾಗಿದ್ದ ನಯ ಭಯ ವಿನಯ ಬಂದ ಮೇಲಿಲ್ಲ.

**ಕಮ್ಮು**

ಈಗೇನಾಯಿತು ಅಂತಾ ?

**ಕಿಟ್ಟು**

ಇನ್ನೇನೇ ಆಗಬೇಕೂ. ಅನುಗಾಲವೂ ಅದೇನು ಸಂಗೀತ ನಿಂದೂ, ಆ ದರಿದ್ರ ಹಿಂದೀ ಸಿನೀಮಾದಾಗಿನ ಪದಗಳೇಕೆ ?

**ಕಮ್ಮು**

ನಿಮ್ಮಮ್ಮನಂತೆ ಮೂಲೇಲಿ ಕುಳಿತು ದಾಸರ ಪದಗಳನ್ನು ಹೇಳಂ ತೀರೋ ಏನು ಗತಿ ! ಅದೆಲ್ಲ ನಿಮ್ಮಮ್ಮಗೇ ಸರಿ, ಕರೆದಾಗ ಪ್ರತ್ಯಕ್ಷವಾಗೋ ರೆಡಿಮೇಡ್ ದೇವ್ರು ಇರುವ ತಮಿಳು ತೆಲುಗು ಸಿನೇಮಾನೇ ಅವರಿಗೆ ಲಾಯಿಖು.

ಕಿಟ್ಟು

ಅದು ಇರಲಿಬಿಡು, ನಮ್ಮಮ್ಮನ ಸಮಾಚಾರ ನಿನಗೇಕೆ. ಕೈಹಿಡಿದಿವ ನಿಗೆ ಕೊಂಚ ಮರ್ಯಾದೆಯಾದರೂ ಬೇಡವೇನೇ ? ನೋಡಿದವರಾದರೂ ಏನಂದಾರೇ ?

ಕಮ್ಮು

(ನಸು ಕೋಪದಿಂದ) ಹೊಸಹೊಸದಾಗಿ ಕಲಿತುಕೊಂಡು ಬರ್‍ತಿದೀರಲ್ಲ ಮಾತನಾಡಲಿಕ್ಕೆ? ಏನಾದರೊಂದು ಅನ್ನಬೇಡಿ ನೀವು, ಮನೆಗೆ ಬರ್‍ತಾನೂವೆ. ಈಗೇನು ನಾನು ನಿಮಗೆ ಮಾಡಿರೋ ಅವಮಾನವಾದರೂ ಅಂತ.

ಕಿಟ್ಟು

(ನಗುವಿನಲ್ಲಿ ತೇಲಿಸಿ) ಹಾ ಹಾ ಹಾ ಕುಪಿತಳಾಗಬೇಡವೇ ಸತೀ ಕಮ್ಮೂ, ನಾನು ಬಂದು ಕಾಲುಗಂಟೆಯಾಯಿತು, ನಿಂತವನು ಹೀಗೆಯೇ ನಿಂತಿದೇನೆ ಕಾಲ ಮೇಲೆ. ಕಾಲುಚಾಚಿ ಕುಳಿತ ನೀನು ಕೊಂಚ ಎದ್ದರೆ ತಪ್ಪೇನು ?....

ಕಮ್ಮು

ಬಹಳ ಚೆನ್ನಾಗಿದೆ. ಇನ್ನೇನೇನು ಕಲಿತುಕೊಂಡು ಬಂದಿರಿ ಹೊಸದಾಗಿ, ಎಲ್ಲ ಒಂದೇ ಬಾರಿಯಾದರೂ ಹೇಳಿಬಿಡಿ. ಬಂದ ಕೂಡಲೆ ನಿಲ್ಲಲಿಕ್ಕೆ ನೀವೇನು ಹೆಡ್ಮಾಸ್ತರೇ ?

ಕಿಟ್ಟು

ಅಬ್ಬಬ್ಬಬ್ಬಾ, ಏನು ಮಾತಿಗೆ ಮಾತು, ಮಾತಿಗೆ ಮಾತು ಆಡಲಿಕ್ಕೆ ಕಲ್ತಿದೀಯಲ್ಲವೇ ? ಎಷ್ಟೇ ಮಾತನಾಡೋದು? ದೇವರು ನಿನ್ನನ್ನೊಂದು ಮೂಕಿಯನ್ನಾಗಿಯಾದರೂ ಮಾಡಲಿಲ್ಲವೇ ! ಇರಲಿ, ಸಾಕು ಹೋಗು ಮಹಾರಾಯಿತಿ. ಆ ಕಣ್ಣು ಸಹ ಕಾಣದ ಮುದುಕಿ ಒಂದೇ ದುಡಿದು ಸಾಯ್ತಾ ಇದೆ. ಒಂದಿಷ್ಟು ನೆರವಾದರೆ ಏನು ಅನ್ಯಾಯವಲ್ಲ........

ಕಮ್ಮು

ಸರಿ ಸರಿ, ನಾನಿನ್ನು ನಿಮ್ಮ ಮನೆ ಕೆಲಸದವಳಾಗಬೇಕಾಯಿತು, ಕಸ ಮುಸುರೆ ಮಾಡಿಕೊಂಡಿರೋಕೆ....

**ಕಿಟ್ಟು**

ಅಲ್ಲವೇ....

**ಕಮ್ಮು**

ಅಲ್ಲವೇ ಏನು ಬೆಲ್ಲವೇ. ನಮ್ಮಮ್ಮ ಮಾಡೋಲ್ಲವೆ, ಎದುರು ಮನೆ ಸುಬ್ಬಮ್ಮ ಪಕ್ಕಮನೆ ಪಾರಮ್ಮ, ಮುಂದಿನ ಮನೆ ಮಾರಿಮ್ಮ, ಹಿಂದಿನ ಮನೆ ರಿಂದಮ್ಮ, ಆಚೆಮನೆ ಅಕ್ಕಮ್ಮ ಎಲ್ಲರೂ ಮಾಡೋಲ್ಲವೇ ಅಂತಾ ತಾನೆ ನಿಮ್ಮ ಸವಾಲು ? ಅವರಿಗೇನಿದೆ ಹೇಳಿ ಬೇರೆ ಕೆಲಸ. ಮುಸುರೆ ತಿಕ್ಕೋಕ್ಕೇ ತಾವು ಜನ್ಮವೆತ್ತಿದ್ದು ಅಂತ ತಿಳಿದು ಬಿಟ್ಟಿದ್ದಾರೆ ಅವರೆಲ್ಲ. ನಾನೂ ಹಾಗೇ ಇರಬೇಕು ಅಂತಾನೇ ನೀವು ಹೇಳೋದು ? ಸಾಕು ಸಾಕು, ಬಟ್ಟೆ ಬದಲಾಯಿಸಿ. ಹಾಗೇ ಕೊಂಚ ಬೀಚಿನ ಕಡೆಯಾದರೂ ತಿರುಗಾಡಿ ಬರೋಣ.

**ಕಿಟ್ಟು**

ಬೀಚು ! ನೀನೇ ಹೋಗಿ ಬಿಟ್ಟು ಬಾ, ಮಹಾರಾಯತಿ.

**ಕಮ್ಮು**

ಅದೇಕಂತೆ, ಇಷ್ಟು ಬೇಸರ ಬೀಚು ಅಂದರೆ ?

**ಕಿಟ್ಟು**

ಏನೇ ಇದೆ ಬೀಚಿನಲ್ಲಿ ? ಎಲ್ಲಿ ನೋಡಿದರೂ ಆ ಹಾಳು ಮಳಲು, ಹೆಂಗಸರು.

**ಕಮ್ಮು**

ಮಳಲು ಹೆಂಗಸರು ಇಲ್ಲದ ಬೀಚು ಎಲ್ಲಿಂದ ತರಬೇಕು ನಿಮಗೆ ? ಬೀಚು ಬೇಡವಾದರೆ ಬಿಡಿ, ಪಾರ್ಕಿಗಾದರೂ ಹೋಗಿ ಬರೋಣ ಬನ್ನಿ.

**ಕಿಟ್ಟು**

ಅಲ್ಲಿ ಮಾತ್ರ ಏನಿದೆಯೋ ಸಂಪತ್ತು ? ಅದೇ ಹೂಗಳನ್ನಲ್ಲವೇನೇ ನೀನು ನೋಡುವದು ? ನೀನು ಹುಟ್ಟುವ ಮುನ್ನವೇ ನಾನು ಒಂದು ವಾಗಿನ್ನು ತುಂಬ ಕವನಗಳನ್ನು ಬರೆದಿದ್ದೇನೆ ಹೂವಿನ ಮೇಲೆಯೇ.

**ಕಮ್ಮು**

ಇನ್ನಾವುದರ ಮೇಲೆ ಬರೆದಿದ್ದೀರಿ ಕವನಗಳನ್ನು ?

**ಕಿಟ್ಟು**

ಹೇಗೆ ಹೇಳಲಿ, ಒಂದೇ ಎರಡೇ! ಹೂವಿನ ಮೇಲೆ, ಚಂದ್ರನ ಮೇಲೆ ಚಿಕ್ಕೆಯ ಮೇಲೆ, ಮೋಡದ ಮೇಲೆ, ಚೆಲುವಿನ ಮೇಲೆ, ಕಟ್ಟಕಡೆಗೆ ಕತ್ತೆಯ ಮೇಲೆ ಸಹ ಕವನವನ್ನು ಬರೆದಿದ್ದೇನೆ ಗೊತ್ತೇ?

**ಕಮ್ಮು**

ಹಾಗೇಕೆ ಕಂಡುದರ ಮೇಲೆಲ್ಲ ಬರೆಯುತ್ತಿದ್ದಿರಿ? ಹೌದು ಹೌದು ಮರೆತಿದ್ದೆ, ಈಗಿನಂತೆ ಆಗ ಕಚೇರಿಯ ಕಾಗದಗಳು ಸಿಗುತ್ತಿರಲಿಲ್ಲವಲ್ಲಾ.

**ಕಿಟ್ಟು**

ಎಷ್ಟು ಜಾಣಳಾಗಿದ್ದೀಯಲ್ಲವೇ ಕಮ್ಮೂ ಒಂದೇ ವರ್ಷದಲ್ಲಿ! ಕವಿಯ ಸಹವಾಸದ ಪ್ರಭಾವವೇ ಹೀಗೆ ನೋಡು.

**ಕಮ್ಮು**

ಸುರುವಾಯಿತೆ ಇನ್ನು, ಬೆನ್ನು ತಟ್ಟಿಕೊಳ್ಳುವುದು! ಸಾಕು ಏಳಿ, ಸುಮ್ಮನೆ ಮನೆಯಲ್ಲಿ ಕೂಡುವದು ಬೇಡ. ನಿಮ್ಮ ಐಸ್‌ಕ್ರೀಮ್-ಐಲೆಂಡ್‌ಗಾದರೂ ಹೋಗಿಬಿಟ್ಟುಬರೋಣ; ನಡೀರಿ.

**ಕಿಟ್ಟು**

ಬಹಳ ಅಡ್ವಾನ್ಸು ಆಗಿಬಿಟ್ಟೆಯಲ್ಲವೇ ನೀನೂ? ಮಾನಾ ಮರ್ಯಾದೆ ಎಲ್ಲಾ ಪಾಟಿ ಬಿಟ್ಟರೆ ಹೇಗೆ? ಅಲ್ಲದೆ ಮನೆಯಲ್ಲಿಯೆ ಏನಾದರೂ ಮಾಡಬಹುದಲ್ಲವೇ? ಅಂಟಿನ ಉಂಡೆ, ಹೆಸರ ಹಿಟ್ಟು, ರಾಗಿ ಹಿಟ್ಟು, ತಾಲೀಪಿಟ್ಟು....

**ಕಮ್ಮು**

(ಅದೇ ದನಿಯಲ್ಲಿ) ದೂಧ್‌ಫೇಡಾ, ಮಾಲ್ಪೂರಿ, ಕೇಸರಿಬಾತ್, ಹೇಳಿ ಹೇಳಿ ಮಾಣಿಯ ಸಹಸ್ರನಾಮಾವಳಿಯಂತೆ. ಈ ಕುಚೇಲನ ಮನೆಗೆ ಇದು ಬೇರೆ ಸಂಪತ್ತು! ನಿಮಗೆ ಹೊರಬರುವದು ಬೇಡವಾದರೆ ಬಿಡಿ, ನಾನಾದರೂ ಹೋಗಿ ಬರ್ತೀನೆ ಲೇಡೀಸ್ ಕ್ಲಬ್ಬಿಗಾದರೂ.

**ಕಿಟ್ಟು**

ಅಲ್ಲವೇ, ಏನೇ ಇದೆ ಅಲ್ಲಿ?

**ಕಮ್ಮು**

ಚೆನ್ನಾಗಿದೆಯಲ್ಲ ನಿಮ್ಮ ಪ್ರಶ್ನೆ. ಲೇಡಿಸ್ ಕ್ಲಬ್ಬಿನಲ್ಲೇನಿದೆ ಅಂದ್ರೇ ನಂತೆ, ಲೇಡಿಸ್ ಕ್ಲಬ್ಬಿನಲ್ಲಿ ಲೇಡಿಸ್ ಇರುತ್ತವೆ. ನಾನಂತೂ ಹೊರಟೆ, ಮಹ ರಾಯರೆ.

(ಗಟ್ಟಿಯಾಗಿ ಚೀರಿ ಅಳುತ್ತಿರುವ ಮಗುವನ್ನೆತ್ತಿಕೊಂಡು ತಿಂಮನ ಪ್ರವೇಶ)

**ಕಿಟ್ಟು—ಕಮ್ಮು**

(ಗಾಬರಿಯಿಂದ) ಏನಾಯಿತೋ, ಏನಾಯಿತೋ ತಿಂಮಾ ಮಗೂಗೆ.

**ತಿಂಮ**

ಏಕೋ ಅಳುತ್ತೆ ? ಏನಾದರೂ ಕಚ್ಚಿತೇನೋ ?

**ಕಮ್ಮು**

ಇಲ್ಲ, ಏನೂ ಕಚ್ಚಿಲ್ಲ.

**ಕಿಟ್ಟು**

ಅದೇಕೋ ಬೆನ್ನಬುಡದಲ್ಲಿ ಮುಟ್ಟಿಕೊಂಡು ಅಳ್ತಾ ಇದೆ ನೋಡೇ. ಏನಾಗಿದೆ ನೋಡೇ ಅಲ್ಲಿ.

**ತಿಂಮ**

ಅಹುದು ಭಾವಾ, ಅಲ್ಲಿಯೇ........

**ಕಮ್ಮು**

ಚಿವುಟಿದೇನೋ ತಿಂಮಾ ?

**ತಿಂಮ**

(ಮೆಲ್ಲಗೆ) ಅಹುದು ಕಮ್ಮು, ನನಗೆ ಆಟಕ್ಕೆ ಹೊತ್ತಾಯಿತು.

**ಕಿಟ್ಟು**

(ಕೋಪದಿಂದ) ಹೋಗೋ ತಿಂಮಾ ಹೊರಗೆ. ಮಗೂನ್ನ ತೊಟ್ಟಿಲಲ್ಲಾದರೂ ಮಲಗಿಸೇ. ನಾನು ತೂಗ್ತೇನೆ. ನೀನು ಹಾಡು ಹೇಳು.

**ಕಮ್ಮ — ಕಿಟ್ಟು**

(ಜೋಗುಳ) ಳೊಳ್ಳೊಳ್ಳೊಳ್ಳೊಳ್ಳೊಳ್ಳಾಯೀಙ.

**ಕಮ್ಮ**

ಹೋಗೋ ತಿಂಮಾ ಹೊರಗೆ.

**ತಿಂಮ**

ಬೇಡ ಕಮ್ಮಾ, ಇಲ್ಲೇ ನೋಡ್ತಾ ಕೂಡ್ತೇನೆ.

---

# ವಣ ಮಹೋತ್ಸವ

## ಪಾತ್ರಗಳು

೧. **ವಣದೇವತೆ** ಪುಡಿಯುಲು ಮರಿತು, ಕಡಿದು ಸುಡಲು ಮಾತ್ರ ಕಲಿತ, ಮಕ್ಕಳ ಉಪದ್ರವದಿಂದ ದಿನೇ ದಿನೇ ವಣಗುತ್ತಿರುವ ಮುದ್ಯೈನೀ ದೇವತೆ.

೨. **ಕುಮಾರಿ ಹಸಿವು** ವಣದೇವತೆಯ ಏಕಮಾತ್ರ ಜೇಷ್ಠಪುತ್ರಿ. ಸದಾ ಅಳುಮೋರಿ.

೩. **ಮಾ|| ಮು** ಆಹಾರ ಮಂತ್ರಿ ಮಾನ್ಯ........ಅನ್ನದಾತಾ.

೪. **ತಿಂಮ** ತಿಂಮ.

( ಸಮಯ ಮತ್ತು ಸಂದರ್ಭ:— ತೆರೆಯು ಮಧ್ಯೆ ಸೀಳಿ ಎರಡೂ ಬದಿಗೂ ಹೋಗುವದು. ಹರಕು ಉಡುಪು ಧರಿಸಿದ ಹಣದೇವತೆಯು ಜೋಲು ಮುಖ ಹಾಕಿ ಗಲ್ಲಕ್ಕೆ ಕೈ ಹಚ್ಚಿ ಮುರುಕು ಸಿಂಹಾಸನದ ಮೇಲೆ ಕುಳಿತು ತೂಕಡಿಸುತ್ತಿದ್ದಾಳೆ. ಹೊಟ್ಟೆಗೆ ಬೆನ್ನು ಹತ್ತಿದ ಕುಮಾರಿ ಹಸಿವು ಕಣ್ಣುಗಳು ಬಿಡುತ್ತ ಇದ್ದೊಂದು ಅರಿವೆ ತಿನ್ನುತ್ತ ಸನಿಯದಲ್ಲಿ ಕುಳಿತಿದ್ದಾಳೆ. ಮಾಮೂನ ಪ್ರವೇಶ. ಮುಂದೆ ಮುಂದೆ ಮಾಮು, ಹಿಂದೆ ಹಿಂದೆ ತಿಂಮು; ತಿಂಮುನ ಕೈಯಲ್ಲಿ ಚಾಮರ, ಬಾಯಲ್ಲಿ ಭಟಾಂಗ)

ತಿಂಮು

(ಅಟ್ಟಹಾಸದಿಂದ) ಶ್ರೀ ಶ್ರೀ ಶ್ರೀ ಅನ್ನದಾತ ಮಾಮು ಮಹಾರಾಜ್ಕೀ ಜೈ ! ಶ್ರೀ ಶ್ರೀ ಶ್ರೀ ಚಪಾತಿದಾತ ಮಾಮು ಮಹಾರಾಜ್ಕೀ ಜೈ !! ಶ್ರೀ ಶ್ರೀ ಶ್ರೀ ಎಲೆ ಪಲ್ಲೆದಾತ ಮಾಮು ಮಹಾರಾಜ್ಕೀ ಜೈ !!!

( ಕುಮಾರಿ ಹಸಿವು ಕಿವಿ ನಿಗುರಿಸಿ ಕೇಳಿ ಚೇತರಿಸಿಕೊಂಡೆದ್ದು ತಿಂಮುನ ಬಳಿ ಓಡಿಬರುವಳು. ತಿಂಮು ದುರು ದುರು ನೋಡಿ ಜುಗುಪ್ಸೆಯಿಂದ, ಗದರಿಸುವ ದನಿಯಲ್ಲಿ ) ಏ ದರಿದ್ರ ! ಹೀಗೇಕೆ ಬಡ ಭಾರತದ ಜಡಜನರಂತೆ ಮುಖ–ಮಾಡಿರುವಿ ? ನಡೆ ಆ ಬದಿ, ಮಾಮು ಭೂಪರು ಬರುತ್ತಿರುವದು ಕಾಣುವದಿಲ್ಲವೇ?

ಮಾಮು

( ಹೊರಳಿ ನೋಡಿ ) ಯಾರೊ ತಿಂಮಾ, ಆ ಹುಡುಗಿ ? ಹೆಣದಂತಿದೆಯಲ್ಲವೋ ?

ತಿಂಮು

ನನಗೂ ಅದೇ ಸಂಶಯ ಮಹಾಪ್ರಭೂ. ನಿಮ್ಮ ರಾಜ್ಯದಲ್ಲಿಯೂ ಅಲ್ಲಾ - ತಮ್ಮ ರಾಜ್ಯದಲ್ಲಿಯೂ–ಅಲ್ಲ–ತಮ್ಮ ಮಂತ್ರ್ಯದಲ್ಲಿಯೂ-ಅಲ್ಲಾ ಅಲ್ಲಾ ನೀವು–ತಾವು ಅನ್ನಮಂತ್ರಿಯಾಗಿ ಆಳುತ್ತಿರುವಾಗಲೂ ಇಂತಹ ಅನ್ನಹೇಡಿಗಳು ಸ್ವತಂತ್ರಭಾರತದಲ್ಲಿ ಏಕೆ ಇರಬೇಕು ?

ಮಾಮು

( ನಗೆಮೊಗದಿಂದ ) ಶಹಬಾಸ್ ತಿಂಮಾ, ಚೆನ್ನಾಗಿಯೇ ಹೇಳಿದಿ. ಹೀಗೆ ಹೇಳುವವರೇ ಇಲ್ಲ ಈ ಭರತಖಂಡದಲ್ಲಿ. ತಿಂಮಾ, ನೀನು ನನ್ನ ಖಾಯಂ ಪ್ರಧಾನ ಕಾರ್ಯದರ್ಶಿಯಾಗಿ ಇರುವೆಯಾ ? ನೀನು ತಿಂದಷ್ಟು ಅನ್ನವನ್ನು ಕೊಡುತ್ತೇನೆ.

**ತಿಂಮ**

ಅಗತ್ಯವಾಗಿ, ಸಂತೋಷದಿಂದ, ಕೃತಜ್ಞನಾಗಿ ತಮ್ಮ ಖಾಯಂ ಕಾರ್ಯದರ್ಶಿಯಾಗಿರುತ್ತೇನೆ, ಅನ್ನದಾತಾ. ಆದರೆ........

**ಮಾಮು**

ಆದರೆ ಏನೋ? ಏಕೆ ಅನುಮಾನಿಸುತ್ತೀ ?

**ತಿಂಮ**

ಬೇರೇನೂ ಇಲ್ಲ ದೇವಾ....ನಾನೇನೋ ಖಾಯಂ ಕಾರ್ಯದರ್ಶಿಯಾಗುತ್ತೇನೆ, ಆದರೆ....ನೀವು.... ಅಲ್ಲಾ— ತಾವು....ನಿಮಗೆ.... ಅಲ್ಲಾ—ತಮಗೆ....ಖಾಯಂ ಆಹಾರ ಮಂತ್ರಿಯಾಗಿ ಉಳಿಯಲು....ಇದೊಂದೇ ನನ್ನ ಸಂಶಯ ಮಹಾಪ್ರಭೂ—

**ಮಾಮು**

( ಹೆಮ್ಮೆಯಿಂದ ) ಹುಚ್ಚಾ ಹುಚ್ಚಾ ! ನನಗೆಲ್ಲಿದೆ ಚ್ಯುತಿ ? ನಾನು ನೆಟ್ಟ ಗಿಡಗಳು ದೊಡ್ಡವಾಗುವವರೆಗಂತೂ ನನ್ನನ್ನು ಯಾವ ಬ್ರಹ್ಮನೂ ಕದಲಿಸಲಾರನು, ತಿಳಿಯಿತೇ ? ಮತದಾರರೇನು ಚಿರಂಜೀವಿಗಳೇ, ಇಂದಿದ್ದವರು ನಾಳಿಲ್ಲ.

**ತಿಂಮ**

ಹಾಗಾದರೆ ಸರಿ ಪ್ರಭೂ. ಆ ಗಿಡಗಳು ಬೆಳೆದ ಮೇಲೆ ನೋಡಿಕೊಳ್ಳೋಣವಂತೆ; ಹಲವನ್ನಂತೂ ಆಡುಗಳು ಮರುದಿನವೇ ಮುಗಿಸಿ ಬಿಟ್ಟಿವೆ; ನಿಮ್ಮ ಆ ಕುಣಿಗಳು....

**ಮಾಮು**

( ನಡುವೇ ಬಾಯಹಾಕಿ ) ಮುಚ್ಚೋ ಬಾಯಿ ಅಧಿಕಪ್ರಸಂಗಿ ! ನಿನ್ನ ಈ ಟೀಕೆಗಳನ್ನು ಕೇಳಿದರೆ ನೀನೂ ಒಬ್ಬ ಪತ್ರಿಕಾಕರ್ತರ ಜಾತಿಯವನೆಂದು ತೋರುತ್ತದೆ; ನಾನು ಹೈದರಾಬಾದಿನಲ್ಲಿ ಅಳುತ್ತಿದ್ದಾಗ....

**ಹಸಿವು**

( ಮಾಮೂರ ಅಂಗಿ ಹಿಡಿದೆಳೆದು, ಅಂಗಲಾಚುತ್ತ ) ಸಾಯುತ್ತೇನೆ ಸ್ವಾಮೀ, ಒಂದು ತುತ್ತು ಅನ್ನ ಕೊಡಿ....

ತಿಂಮ

(ಅರ್ಭಟಿಸಿ) ಮುಚ್ಚೇ ಬಾಯಿ, ಪಿಶಾಚಿ; ಅನ್ನವಿಲ್ಲದೆ ಸಾಯುತ್ತಾಳಂತೆ. ಪ್ರಭೂ, ಇದೆಲ್ಲವೂ ಢೋಂಗಿ ಢೋಂಗಿ, ಡೋಕಾರಿ. ಅನ್ನವಿಲ್ಲದೆ ಯಾರನ್ನೂ ತಾವು ಸಾಯಗೊಡುವದಿಲ್ಲೆಂದು ತಾವು ಹೋಟೆಲ ಮಾಲಿಕರ ಸಂಘದಲ್ಲಿ ಹೇಳಿದುದು ಈ ಮೂರ್ಖರಿಗೆ ತಿಳಿದಂತೆಯೇ ಇಲ್ಲ.

ಹಸಿವು

( ನಿಲ್ಲಲು ತ್ರಾಣವಿಲ್ಲದೆ ಕಂಣುಗಳನ್ನು ಗರ್ರನೆ ತಿರುವಿ ಧುಪ್ಪೆಂದು ನೆಲಕ್ಕೆ ಬೀಳುವಳು. ) ಅಯ್ಯೋ, ಸತ್ತೆ ಸತ್ತೆ. ಅನ್ನ ಅನ್ನಾ....ಅಯ್ಯೋ....

ಮಾಮು

ತಿಂಮಾ, ಎಬ್ಬಿಸು ಎಬ್ಬಿಸು ಅವಳನ್ನು. ಅವಳು ಯಾರೆಂಬುದನ್ನು ಮೊದಲು ತಿಳಿದುಕೋ.

ತಿಂಮ

(ಕೈತಿರುವುತ್ತ) ಛೇ ಛೇ, ಇವಳು ಮನುಷ್ಯಳೇ ಅಲ್ಲ ಪ್ರಭೂ. ಪಿಶಾಚಿ ಇದು ಪಿಶಾಚಿ. ಮುಖ ನೋಡಿದರೆ ತಿಳಿಯದೇ? ಇವಳು ಸತ್ತೇ ಅನೇಕ ದಿನಗಳಾಗಿರಬೇಕು. ಬೇಕೆಂದು ಬದುಕಿದವಳಂತೆ ನಟಿಸುತ್ತಿರುವಳು.

ಮಾಮು

ಓಹೋ, ಹಾಗೂ ಇದೆಯೇ? ಇಂತಹ ಬೂಟಾಟಿಕೆಯ ಪ್ರಜರೂ ಇರುವರೇ ಈ ನಮ್ಮ ಸ್ವತಂತ್ರ ಭಾರತದಲ್ಲಿ !

ತಿಂಮ

(ಅಮೇರಿಕೆಯನ್ನು ಕಂಡ ಕೊಲಂಬಸನಂತೆ) ಹಾ ! ತಿಳಿಯಿತು, ತಿಳಿ ಯಿತು ಚಪಾತಿದಾತಾ, ಈಗ ಎಲ್ಲವೂ ತಿಳಿಯಿತು. ದೇವಾ, ಇವಳು ನಿಮ್ಮ ಭಾರೀ ಶತ್ರು. ನಾಲ್ಕೂ-ಅಲ್ಲ-ಅಲ್ಲ ಐದೂ ದಿಕ್ಕಿಗೆ ಕೋತಿಯ ಬಳ್ಳಿಯಂತೆ ಹಬ್ಬಿರುವ ತಮ್ಮ ಸತ್ಕೀರ್ತಿಗೆ ಕಲಂಕ ತರಲು ಅಂದು ಅನ್ನವಿಲ್ಲದೆ ಬಿಹಾರ ದಲ್ಲಿ ಸತ್ತ ಆ ಮೂವತ್ತೆರಡು ಅನ್ನದ್ವೇಷಿಗಳ ಮುಖಂಡಳೇ ಇವಳು.

ಮಾಮು

ಮುಚ್ಚೋ ಬಾಯಿ ಮೂರ್ಖಾ.ಅದೆಲ್ಲವೂ ಅಪಪ್ರಚಾರ, ಹದಿನಾರಾಣೆ ಅಪಪ್ರಚಾರ. ಸತ್ತಿರುವ ಆ ಶತಮೂರ್ಖರು ನನ್ನೆದುರು ಇಂದು ಬಂದು

ನಿಲ್ಲಲಿ ಅವರಿಗೆ ಅಷ್ಟು ಧೈರ್ಯವಿದ್ದರೆ. ಕಳ್ಳರಂತೆ, ಹೇಡಿಗಳಂತೆ, ಭೂಗತರಾದ ಕಮ್ಯುನಿಷ್ಟರಂತೆ ಕುಣಿಗಳಲ್ಲಿ ಅಡಗಿಕೊಂಡು........

**ತಿಂಮು**

(ನೆಲಕ್ಕೆ ಬಲಗಾಲು ವದೆದು) ಶಹಬ್ಬಾಸ್ ಅನ್ನ ಚಟ್ನಿದಾತಾ !

**ಹಸಿವು**

(ಮೆಲ್ಲಗೆ ಚೇತರಿಸಿಕೊಂಡು ಕಣ್ಣು ತೆರೆದು) ಯಾರದು ಯಾರದು, ಯಾರೋ ಅನ್ನ ಚಟ್ನಿ ಅಂದಂತಾಯಿತು. (ಒಣತುಟಿಯ ಮೇಲೆ ನಾಲಿಗೆಯು ಸ್ನಾಡಿಸುತ್ತ ನನಗೊಂದಿಷ್ಟು ಕೊಡಿ, ಹಸಿವಿನಿಂದ ಬಹು ಬಳಲಿದ್ದೇನೆ.ಸ್ವಾಮೀ ನೀವಾದರೂ....(ಮಾಮುವಿನ ಅಂಗಿಯ ಚಾಲವನ್ನು ಹಿಡಿಯಲು ಕೈಚಾಚುವಳು)

**ತಿಂಮು**

ಏ, ಅಷ್ಟ ದರಿದ್ರಾ ( ಆತ್ಮ ) ದರಿದ್ರಕ್ಕೆ ಹಸಿವೆಯೂ ಹೆಚ್ಚು ಎನ್ನುವದು ಸುಳ್ಳಲ್ಲ. (ಪ್ರಕಾಶ) ಅವರನ್ನೇಕೆ ಕಾಡುತ್ತಿರುವಿ,ಇಲ್ಲಿ ಬಾ. ಆಹಾರ ಮಂತ್ರಿ ಎಂದರೆ ಅವರೇ ತಮ್ಮ ಅನ್ನದ ತಪ್ಪೇಲಿ ಎಂದು ತಿಳಿದುಕೊಂಡಂತಿದೆ ನಮ್ಮ ಭಾರತದ ಪ್ರಜರು. ಇಗೋ, ತಗೆದುಕೋ, ಇದನ್ನು ತಿಂದು ತೊಲಗು. (ಹಟಾತ್ತಾಗಿ ಏನೋ ನೆನಪಾದಂತಾಗಿ) ಇಲ್ಲ ಇಲ್ಲ, ನಡೆ ನಡೆ. ನೀನು ಹೆಂಣೆಂಬುದನ್ನು ಮರೆತಿದ್ದೆ.

**ಮಾಮು**

ಕಿಸೆಯಲ್ಲಿ ಏನಾದರೂ ಇದ್ದರೆ ಕೊಟ್ಟುಬಿಡೋ ತಿಂಮಾ, ತಿನ್ನಲಿ ಪಾಪ.

**ತಿಂಮು**

ಬೇಡ ಪ್ರಭೂ ಬೇಡ, ಇವಳಿಗೇಕೆ ತಿನ್ನಲು ಕೊಡಬೇಕು ? ಇವಳು ಹೆಂಗಸು ದೇವಾ, ನೋಡಿದರೆ ತಿಳಿಯುವದಿಲ್ಲವೇ ?

**ಹಸಿವು**

ಹೆಂಣಾದ ಮಾತ್ರಕ್ಕೆ ನನಗೆ ಅನ್ನ ಬೇಡವೇ ತಿಂಮರಾಯಾ ?

**ತಿಂಮು**

ಛೇ ಹುಚ್ಚಿ, ನಾಡ ಹುಚ್ಚಿ.ಹಳೆಯ ವರ್ತಮಾನ ಪತ್ರಿಕೆ ಓದಿನೋಡು; ತಿಳಿದೀತು. ನಿನ್ನ ಪೂರ್ವಜನ್ಮದ ಪುಣ್ಯದಿಂದ ನಿನಗೀಗ ಪ್ರತ್ಯಕ್ಷರಾಗಿ ದರ್ಶನ ವಿತ್ತಿರುವ ಈ ಅನ್ನ ದೇವರು ಏನು ಹೇಳಿದಾರೆ ಗೊತ್ತೇ ?

**ಮೂಮು**

ಇದೇನೋ ತಿಂಮಾ ನಿನ್ನ ಚೇಷ್ಟೆ ? ನಾನೇನು ಹೇಳಿದ್ದೇನೆ ?

**ತಿಂಮು**

ಮರತೇ ಬಿಟ್ಟಿರಾ ಪ್ರಭೂ ಇಷ್ಟು ಜಾಗೃತೆ ? ಏನಾಶ್ಚರ್ಯ ! ಗಂಟೆಗೊಂದು ಹೇಳಿಕೆಯನ್ನು ಹೊರಡಿಸಿದರೆ ಯಾರಿಗಾದರೂ ಆಗುವದೇ ಹೀಗೆ. ಬೆಳಗಿನ ಹೇಳಿಕೆಯು ನಂಜೆಯ ಹೇಳಿಕೆಗೆ ಡಿಕ್ಕಿಯಾಗಲೇಬೇಕು. ತಾವು ಅಂದೊಮ್ಮೆ ಸುವಾಸಿನಿಯರ ಕೂಟದಲ್ಲಿ ಅಪ್ಪಣೆ ಕೊಡಿಸಿದ್ದಿರಿ, ಸೌಂದರ್ಯೋಪಾಸಕರಾದ ರಸಿಕ ದೇವಾ, ಸ್ತ್ರೀಯರು ಮೈಕಟ್ಟನ್ನು ಅಂದವಾಗಿರಿಸಿಕೊಳ್ಳಲು ಕೊಂಚವೇ ಆಹಾರವನ್ನು ತೆಗೆದುಕೊಳ್ಳತಕ್ಕದ್ದೆಂದು.

**ಮೂಮು**

(ನಗುತ್ತ ಕೋಪದಿಂದ) ನಿನ್ನ ಶ್ರಾದ್ಧ ! ಬಿಕ್ಷುಕಳಂತಿರುವ ಈ ಅಪಹಾತಳಿಗೆ ಅಂದವಾದ ಮೈಕಟ್ಟಿನ ವಿಚಾರವೇಕೋ? ಇರಲಿ ಕೊಡೋ ತಿನ್ನಲಿ, ನಿನ್ನ ಕಿಸೆಯಲ್ಲಿ ಏನಾದರೂ ಇದ್ದರೆ.

**ತಿಂಮು**

(ನೆನಪಿಸಿಕೊಂಡು) ಅಯ್ಯೋ ! ಏನು ಮಾಡಲಿ ಪ್ರಭೂ, ಇವಳು ನಿಜವಾಗಿಯೂ ದುರ್ದೈವಿ. ತಾವು ಆಜ್ಞೆ ಮಾಡಿದರೆ ಈ ತಕ್ಷಣವೇ ಕೈಬಾಡಿಗೆ ಬೆಳ್ಳಿತಟ್ಟೆಗಳನ್ನು ತಂದು, ಬಾಸುಂದಿ, ಜಿಲೇಬಿ ಬಕಾಳಾಭಾತ್‌ಗಳನ್ನು ಕೊಟ್ಟು ಇವಳಿಗ ಭೋಜನ ಸಮಾರಂಭವನ್ನು ಮಾಡಿಸುತಿದ್ದೆ, ಶ್ರೀಮಂತರು ಗವರ್ನರುಗಳಿಗೆ ಮಾಡಿಸಿದಂತೆ. ಆದರೆ ಇಂದು—

**ಮೂಮು**

ಇಂದು ಮಾತ್ರ ಏನಾಗಿದೆಂಪೋ ? ನಿನ್ನ ಹರಟೆ ಸಾಕು, ಏನಾದರೂ ಕೊಡೋ ಅವಳಿಗೆ.

**ತಿಂಮು**

ಅಲ್ಲ ಪ್ರಭೂ. ಇಂದು ಸೋಮವಾರ ಅಂದರೆ ಆದಿತ್ಯವಾರದ ಮರು ದಿನವಲ್ಲವೇ ದೇವಾ ?

**ಮೂಮು**

ಆದರೇನಾಯಿತೋ, ಏನೇನೋ ಹೊಸ ಹೊಸದೆಲ್ಲ ಹೇಳುತ್ತಿರುವಿ ?

**ತಿಂಮ**

ತಾವು ಇದನ್ನು ಮರೆತುಬಿಟ್ಟಿರಾ ಜ್ಞಾನಭಾಂಡಾರಿ? ಸೋಮವಾರ ಪ್ರತಿಯೊಬ್ಬರೂ ಬರೀ ರಾಜಗಿರಿಪಲ್ಲೆ, ಮೆಂತೆದಪಲ್ಲೆ, ಗೋಳೀಪಲ್ಲೆ, ಹುಳಿ ಚಿಕ್ಕಿನಪಲ್ಲೆ, ಪನಕನಪಲ್ಲೆ, ಹರಿವಿಪಲ್ಲೆ, ಕಿರಕಸಾಲೀಪಲ್ಲೆ, ಪುಂಡೀಪಲ್ಲೆ, ದೇವದಾರೀಪಲ್ಲೆ, ಹಕ್ಕರಿಕಿಪಲ್ಲೆ, ಚಿಗುರು ಮುಂತಾದುವನ್ನೇ ತಿನ್ನತಕ್ಕದ್ದೆಂದು ತಾವು ಫರ್ಮಾನು ಹೊರಡಿಸಿಲ್ಲವೇ ಪಲ್ಲೆಪ್ರೇಮಿ?

**ಮಾಮು**

ಬಾಯಿ ಮುಚ್ಕೋ ಮೂರ್ಖ. ಯಾವುದೋ ಇದ್ದುದನ್ನಿಷ್ಟು ಕೊಟ್ಟು ಅವಳ ಪ್ರಾಣವನ್ನು ಮೊದಲು ಉಳಿಸು.

**ತಿಂಮ**

(ನಿರುಪಾಯನಾಗಿ) ತಪ್ಪಾಯ್ತು ಮಹಾಸ್ವಾಮಿ. ಆಹಾರವನ್ನು ತಿಂದು ಒಂದು ವೇಳೆ ಇವಳ ಆಕಾರವು ಕೆಟ್ಟುಗಿಟ್ಟರೆ ನಾನಂತೂ ಹೊಣೆಯಲ್ಲ ನೋಡಿ. ಎಲ್ಲೆ ಸ್ತ್ರೀರತ್ನವೇ, ತೆಗೆದುಕೋ ತಿನ್ನು (ಕಿಸೆಯಿಂದ ಒಂದು ಕಾಗದವನ್ನು ತೆಗೆದು ಅವಳ ಮುಂದೆ ಎಸೆಯುವನು.) ತಿನ್ನು, ತಿಂದು ಇನ್ನಾದರೂ ತೃಪ್ತಳಾಗು.

**ಹಸಿವು**

ಇದೇನು ತಿಂಮರಾಯಾ ನಿನ್ನ ಚೇಷ್ಟೆ, ಸಾಯುವಾಗಲೂ ಕಾಗದವನ್ನು ತಿನ್ನಲು ನಾನೇನು ಕತ್ತೆಯೋ? ನೀನು ಮತ್ತು ನಿನ್ನ ಪ್ರಭುಗಳು ಇದನ್ನೆ ತಿಂದು ಬದುಕುವಿರಾ? (ದುರುದುರು ನೋಡುವಳು. ತಿಂಮನಿಗೆ ಅಂಜಿಕೆಯಾಗುವದು.)

**ತಿಂಮ**

(ಮಾಮೂನ ಕಡೆ ನೋಡಿ) ಪ್ರಭೂ, ನೋಡಿದಿರಾ ಇವಳ ಸೊಕ್ಕನ್ನು; ಇವಳಿಗೆ ಶಿಕ್ಷೆಯನ್ನು ಮಾಡಿಸಿರಿ. ಸರಕಾರಕ್ಕೇ ಅನಾದರ ಮಾಡುತ್ತಿದ್ದಾಳೆ.

**ಮಾಮು**

ಬರೀ ಕಾಗದವನ್ನು ಹೇಗೋ ಅವಳು ತಿನ್ನಬೇಕು? ಅದರಲ್ಲಿ ಏನಿದೆ ಅವಳಿಗೆ ತಿನ್ನಲು?

**ತಿಂಮು**

ಇದೇನು ಪ್ರಭೂ, ತಾವೂ ಅವಳಂತೆಯೇ ಮಾತಾಡುತ್ತಿರುವಿರಿ ? ನಾನು ಕೊಟ್ಟುದುದು ಬರೀ ಕಾಗದವಲ್ಲ ನನ್ನೊಡೆಯಾ. ಅದರಲ್ಲಿ ತಮ್ಮ ಎಂಟೂ ಪಾಯಿಂಟುಗಳು ಅಚ್ಚಾಗಿವೆ. ಇದಕ್ಕಿಂತಲೂ ಹೆಚ್ಚು ಅವಳಿಗೇನು ಬೇಕು ?

**ಮಾಮು**

ಭಾಪು ತಿಂಮಾ ಭಾಪು. ನಿನ್ನ ಕಾಲೋಚಿತ ಕಾರ್ಯಕ್ಕೆ ನಾನು ಮನ ಮೆಚ್ಚಿದೆ. ಇದ್ದರೆ ನಿನ್ನಂತಹ ಕಾರ್ಯದರ್ಶಿ ಇರಬೇಕು. ಆದರೆ ನನ್ನ ಎಂಟು ಪಾಯಿಂಟುಗಳ ಸ್ವಾದವನ್ನು ಸವಿಯುವ ಯೋಗ್ಯತೆಯು ಈ ನಿರಕ್ಷರಿಗೆ ಹೇಗೆ ಬರಬೇಕು ? ಎಲೈ ತಿಂಮಾ, ತಕ್ಷಣವೇ ಬರೆದುಕೋ ನನ್ನ ಇನ್ನೊಂದು ಹೇಳಿಕೆಯನ್ನು.ಬೇಗ ಬರೆದುಕೋ, ಆಮೇಲೆ ಮರೆತುಹೋದರೆ—

**ತಿಂಮು**

(ಇನ್ನೂ ಹೆಚ್ಚು ಅವಸರದಿಂದ) ಬೇಗ ಬೇಗ ಹೇಳಿರಿ. ತಮ್ಮ ಒಂದು ಹೇಳಿಕೆಯು ಅಕಸ್ಮಾತ್ ತಡವಾದರೆ ಲಕ್ಷಾವಧಿ ಜನರು ಅನ್ನವಿಲ್ಲದೇ ಸತ್ತು ಹೋಗಬೇಕಾದೀತು (ಕಾಗದ ಸೀಸಕಡ್ಡಿ ಹಿಡಿದು ಬರೆಯಲು ಸಿದ್ಧನಾಗುವನು.) ಹೂ, ಹೇಳಿರಿ ಹೇಳಿರಿ.

**ಮಾಮು**

ಹೂ ಬರೆದುಕೋ.... ಅಕ್ಷರ ಬಲ್ಲವನಿಗೆ ಅನ್ನದ ಕೊರತೆ ಇಲ್ಲ. ಒಬ್ಬರೂ ಸಾಯಕೂಡದು, ಇದು ನನ್ನ ಆಜ್ಞೆ. ಕಣ್ಣುಮುಚ್ಚಿ ತೆರೆವುದರೊಳಗಾಗಿ ಎಲ್ಲರೂ ಪಕ್ಕಾ ಅಕ್ಷರಸ್ಥರಾಗಿ ನನ್ನ ಎಂಟೂ ಪಾಯಿಂಟುಗಳನ್ನು ತಿಂದು....ಸಾಯಬೇಡಿರಿ....ಅಲ್ಲ....ಗಳನ್ನು ತಿಂದು....ಬದುಕಿರಿ....ಬೇಡ.... ತಿಂದು ತೇಗಿರಿ. (ಮೂರ್ಛೆ ಹೋಗುತ್ತಿರುವ ಕುಮಾರಿ ಹಸಿವುಳನ್ನು ಕಂಡು ಕಾತುರದಿಂದ) ಅಯ್ಯೋ ಅಯ್ಯೋ ತಿಂಮಾ ! ಸತ್ತಳು ಸತ್ತಳು, ಅಯ್ಯೋ ಅನ್ನವಿಲ್ಲದೆ ಸತ್ತಳು, ಹೋಯಿತು ಒಂದು ಪ್ರಾಣ.

**ತಿಂಮು**

ಅಯ್ಯೋ, ಏನು ಮಾಡಲಿ ಅನ್ನದಾತಾ ? ಅವಳ ದರಿದ್ರ ಪ್ರಾಣವು ಹೋದರೆ ಹೋಗಲಿ, ನನಗೆ ಅದರ ಯೋಚನೆಯು ಎಷ್ಟೂ ಇಲ್ಲ; ಆದರೆ ಇದು ತಮ್ಮ ಮಾನದ....ಅಲ್ಲ....ತಮ್ಮ ಮಾತಿನ ಮಾನದ ಪ್ರಶ್ನೆ.

**ಮಾಮು**

ಅಹುದು ಅಹುದು. ಅನ್ನವಿಲ್ಲದೆ ಯಾರನ್ನೂ ಸಾಯುಗೊಡುವದಿಲ್ಲ ವೆಂದು ನಾನೇ ಎಲ್ಲಿಯೋ ಒಂದು ಬಾರಿ ಹೇಳಿದಂತೆ ನೆನಪಿದೆ. ನಿನ್ನ ಕೈಚೀಲ ದಲ್ಲಿ ಏನೂ ಇಲ್ಲವೇನೋ ತಿಂಮಾ, ಅವಳಿಗೆ ಕೊಡಲು.

**ತಿಂಮ**

(ಕೈಚೀಲದಲ್ಲಿ ಹುಡುಕಾಡಿ) ಇದೆ ಪ್ರಭು. ಆದರೆ ಇದು ಅವಳಿಗೆ ಸರಿ ಹೋಗಲಿಕ್ಕಿಲ್ಲ. ಕೇಂದ್ರದ ಆಹಾರ ಖಾತೆಯು ಆರ್ಟ ಪೇಪರಿನಲ್ಲಿ ಮುದ್ದಾಗಿ ಅಚ್ಚು ಮಾಡಿದ ಸಚಿತ್ರ ಪುಸ್ತಕವಿದು. ಮೈದಾ ಹಿಟ್ಟಿನಿಂದ ವಿವಿಧ ತಿಂಡಿ ತಿನಸುಗಳನ್ನು ಹೇಗೆ ಮಾಡಬೇಕೆಂಬುದೆಲ್ಲವೂ ಇದರಲ್ಲಿ ಇದೆ ದೇವಾ.

**ಮಾಮು**

ಹೋಗೋ ಬೆಪ್ಪ, ಇವಳ ಪ್ರಾಣವೇ ಹೋಗುತ್ತಿರುವಾಗ ನಿನ್ನ ಮೈದಾಹಿಟ್ಟಿನ ಪುರಾಣವೇಕೆ ? ಅಯ್ಯೋ, ಏನು ಮಾಡಲಿ ? ಏನು ಮಾಡಲಿ ? ನನ್ನ ವಾಗ್ದಾನವು ವ್ಯರ್ಥವಾಯಿತು. ಅನ್ನವಿಲ್ಲದೆ ಇವಳು ಸತ್ತರೆ....

**ತಿಂಮ**

ಪ್ರಭೂ, ತೆಗೆದುಕೊಳ್ಳಿ. ಅಂಜಬೇಡಿ. (ಕೈಚೀಲದಿಂದೊಂದು ರಿವಾಲ್ವ ರನ್ನು ತೆಗೆದು) ತೆಗೆದುಕೊಳ್ಳಿ ಇದನ್ನು. ಪ್ರಾಣಕ್ಕಿಂತಲೂ ಮಾನವು ಹೆಚ್ಚು. ಹೋಗಲಿ ಅವಳ ಪ್ರಾಣ, ಉಳಿಯಲಿ ನಿಮ್ಮ ಮಾನ. ಹೊಡೆದು ಬಿಡಿ ಅವ ಳನ್ನು ಈ ಕ್ಷಣವೇ. ಬೇಗ ಹೊಡೆಯಿರಿ, ಅವಳ ಪ್ರಾಣವು ಹೋಗು ವಳಗಾಗಿಯೇ ನೀವು ಅವಳನ್ನು ಕೊಲ್ಲಬೇಕು. ಅವಳು ಗುಂಡಿನೇಟಿಗೆ ಸತ್ತರೆ ಸಾಕು, ನಿಮ್ಮ ವಾಗ್ದಾನವು ಸಾರ್ಥಕವಾಗುತ್ತದೆ. ಆಗ ಅವಳು ಅನ್ನವಿಲ್ಲದೆ ಸತ್ತಂತಾಗುವದಿಲ್ಲ. ಹೂ, ಹೊಡೆಯಿರಿ.

**ಮಾಮು**

(ಮುಗ್ಧನಾಗಿ) ಹಾ! ತಿಂಮಾಚಾರ್ಯಾ, ಪಾರ್ಥನಿಗೆ ಕೃಷ್ಣನಿರುವಂತೆ ನನಗೆ ನೀನು. ನಿನ್ನ ಮೊದುಳಿಗೆ ನಾನು ಶರಣು ಬಂದೆ. ಕೊಡು ನಿನ್ನ ರಿವಾಲ್ವರನ್ನು. ಅಹುದು, ಈಗ ನನಗೆ ಜ್ಞಾನೋದಯವಾಯಿತು. ಪ್ರಾಣವೆಂದರೆ ತೃಣಸಮಾನ, ಅದರಲ್ಲೂ ಇತರರ ಪ್ರಾಣ; ತತ್ರಾಪಿ ನನ್ನ ಮಾನವನ್ನು ಕಾಯ್ದುಕೊಳ್ಳಲು–ತಾ ಹೊಡೆದು ಬಿಡುತ್ತೇನೆ. ಅಹುದೂ, ಅಹುದೂ ಇವಳು ಗುಂಡಿನೇಟಿಗೆ ಸಾಯು ವದೇ ನನಗೂ ಶ್ರೇಯಸ್ಕರ. (ಗುರಿಯಿಟ್ಟು ಹೊಡೆಯುವದು—ಧಂ)

**ತಿಂಮು**

(ಗಹಗಹಿಸಿ ನಕ್ಕು) ಏನು ಪ್ರಭೂ?

**ಮಾಮು**

(ಕಕ್ಕಾಬಿಕ್ಕಿಯಾಗಿ) ಏನೋ ತಿಂಮಾ ಇದು? ಬರೀ ಢಂ ಎಂದಿತಾಗಲಿ ಇದರಲ್ಲಿ ಏನೂ ಇಲ್ಲವಲ್ಲೋ?

**ತಿಂಮು**

ಇದು ಇಷ್ಟೇ ಸ್ವಾಮಿ, ೪೭ನೆಯ ಮಾಡೆಲ್ ರಿವಾಲ್ವರ್ ಇದು. ದೇಶ ಭಕ್ತರ ಭಾಷಣದ ಜಾತಿಯದು-ಬರೀ ಢಂ ಎಂದು ಹಾರುತ್ತದೆಯಾಗಲಿ ಇದ ರಲ್ಲಿ ಏನೂ ಹುರುಳಿಲ್ಲ. ಇದರಿಂದ ಯಾರೂ ಸಾಯುವಂತಿಲ್ಲ, ಬದುಕು ವಂತಿಲ್ಲ. ಅಹಹಹಹ (ಹಲ್ಲುಕಿರಿಯುವನು. ಅರೆನಿದ್ರೆಯಲ್ಲಿದ್ದ ವಣದೇವತೆಯು ತಿಂಮುನ ೪೭ನೆಯ ಮಾಡೆಲ್ ಅಹಿಂಸಾ ರಿವಾಲ್ವರಿನ 'ಢಂ' ಶಬ್ದಕ್ಕೆ ಬಿದ್ದೆದ್ದು ಚೀರುತ್ತ ತನ್ನ ಮಗಳಬಳಿ ಬರುವಳು. ಮಾಮು ಮತ್ತು ತಿಂಮು ಆವಳ ಪಾದಾರ ವಿಂದಕ್ಕೆ ಎರಗುವರು.)

**ವಣದೇವತೆ**

(ಮಾಮುವನ್ನು ಕುರಿತು) ಮಗೂ ನೀನಾರು?

**ತಿಂಮು**

(ಆಶ್ಚರ್ಯದಿಂದ) ಅಯ್ಯೊ ಹುಚ್ಚು ಮಾತೇ? ಇದು ಗೊತ್ತಿಲ್ಲವೆ ನಿನಗೆ? ವರ್ತಮಾನ ಪತ್ರಿಕೆಗಳಲ್ಲಿಯಾದರೂ ಇವರ ಚಿತ್ರವನ್ನು ನೋಡಿ ಲ್ಲವೇ? ಇವರೇ ತಾಯಿ, ನಮ್ಮ ಅನ್ನದ ತಪ್ಪೇಲಿ, ಸಾರಿನ ಡಬರಿ ಇತ್ಯಾದಿ ಇತ್ಯಾದಿ. ಅಲ್ಲದೆ ನಿನ್ನ ಜೀರ್ಣೋದ್ಧಾರಕ್ಕಾಗಿಯೇ ಈ ಜನ್ಮವೆತ್ತಿ ಭೂಲೋಕಕ್ಕೆ ಧಾವಿಸಿರುವ ಸಾಕ್ಷಾತ್........

**ಮಾಮು**

ಸಾಕುಮಾಡೋ ತಿಂಮಾ, ನಿನ್ನ ಭಟಾಂಗವನ್ನು, (ವಣದೇವತೆಯನ್ನು ಕುರಿತು) ಎಲೈ ವನದೇವತೆಯೇ, ನಾನೊಬ್ಬ ನಿನ್ನ ಸೇವಕ. ನಿನ್ನ ಸಿರಿಸಂಪತ್ತು ಸೌಂದರ್ಯಗಳು ಬೆಳೆಯಲೆಂದು ಹೆಣಗಾಡಲು ಸೊಂಟಕಟ್ಟಿ ನಿಂತಿರುವ ಯೋಧ ನಾನೊಬ್ಬ. ನಾನು ಕೈಹಿಡಿದ ಕಾರ್ಯವು ಸುಗಮವಾಗಲಿ. ನಾನು ನೆಟ್ಟ ಗಿಡಗಳು ಬೆಟ್ಟದಂತೆ ಬೆಳೆಯಲಿಯೆಂದು ನನ್ನನ್ನು ಆಶೀರ್ವದಿಸು ತಾಯೇ (ತಲೆ ಬಾಗುವನು)

**ವಣದೇವತೆ**

( ಕೊಂಚ ಪರುಷಿತಳಾಗಿ ಅಳುವ ದನಿಯಲ್ಲಿ ನಗುತ್ತ ) ಮಗನೇ, ನನ್ನ ಸಲುವಾಗಿ ಯಾವಾವ ಗಿಡಬಳ್ಳಿಗಳನ್ನು ನೆಡೆಸಿರುವಿ ?

**ತಿಂಮು**

ನೀನು ವರ್ತಮಾನಪತ್ರವನ್ನೇ ಓದಿದಂತಿಲ್ಲ ತಾಯೆ. ಈ ಅರಣ್ಯದಲ್ಲಿ ಯಾರೂ ಏಜಂಟರೇ ಇಲ್ಲವೇ ? ಪ್ರತಿಯೊಂದು ಗಿಡ, ಮರ, ಸಸಿ, ಬಳ್ಳಿಗಳನ್ನೂ ನೆಡಿಸಿದ್ದಾರೆ. ಹೇಗೆ ಹೇಳಲಿ, ಒಂದಲ್ಲ, ಹತ್ತಲ್ಲ ಹತ್ತುಸಾವಿರಗಳಲ್ಲ. ಇಗೋ ತಾಯೇ, ಈ ತಕ್ಷಣವೇ ಕೇಳುವಂಥಾತ್ತಳಾಗು. ಬೇವಿನಬಳ್ಳಿ, ಕರಿಬೇವಿನಬಳ್ಳಿ, ತೆಂಗಿನಬಳ್ಳಿ, ಹೀರೀಗಿಡ, ಸವತಿಮರ, ಕುಂಬಳಮರ, ಹುಣಸಿಬಳ್ಳಿ, ಬಾಳಿಬಳ್ಳಿ, ಮುಂತಾದೆಲ್ಲವನ್ನೂ ಹಾಕಿಸಿದ್ದಾರೆ ತಾಯೆ. ಒಂದು ಮರವಂತೂ ಈಗಾಗಲೆ ಮುಗಿಲ ಆ ಬದಿಗೂ ಹೊರಟು ದೇಶದ ತುಂಬ ಹಂಣು ಹಂಪಲಗಳ ಮಳೆ ಸುರಿಸಿದೆ.

**ಮಾಮು**

(ಹೆಮ್ಮೆ ಸಂತಸಗಳಿಂದ) ಅದಾವ ಮರವೋ ತಿಂಮಾ, ನನಗೇ ತಿಳಿಯದು. ಮೊನ್ನೆ ಮೊನ್ನೆ ನಾನು ಹಾಕಿದ ಬೀಜವು ಇಷ್ಟು ಬೇಗ ಮರವಾಗಿ ಫಲ ಕೊಟ್ಟಿತೇ ?

**ತಿಂಮು**

ಏನು ಪ್ರಭುವರ್ಯಾ, ಹೀಗೆನ್ನುವಿರಿ ? ಬರೀ ಫಲಕೊಡುವದಷ್ಟೇ ಅಲ್ಲ. ಅವನ್ನು ತಿನ್ನಲು ಸಾಕಷ್ಟು ಜನರಿಲ್ಲದೆ ಅವರ ಹಂಣುಗಳು ನೆಲಕ್ಕೆ ಬಿದ್ದು ಕೊಳೆತು ಕಾಲರಾ ಬೇನೆಗೆ ಕಾರಣವಾಗಿವೆಯಂತೆ.

**ಮಾಮು**

ನಾನೇ ನೆಟ್ಟದುದೇನೋ ತಿಂಮಾ ಅದು ?

**ತಿಂಮು**

ಅಹುದು ಮಿಸ್ಟರ್ ಅನ್ನದ್....

**ಮಾಮು**

ಯಾವ ಮರವೋ ಅದು ?

**ತಿಂಮ**

ಗೊತ್ತಿಲ್ಲವೇ ಅನ್ನದಾತಾ ? ಮಾತಿನ ಮರ.

**ಮೂಮು**

ಮುಚ್ಕೋ ಬಾಯಿ, ಶತಮೂರ್ಖ.

**ವಣದೇವತೆ**

ಎಲೈ ಮಕ್ಕಳಿರಾ, ನನ್ನ ಮಗಳ ಈ ಸ್ಥಿತಿಯನ್ನು ಮೊದಲು ನೋಡಿರಿ. ಇವಳನ್ನು ಸಾಯಗೊಟ್ಟು ನನ್ನ ಶೃಂಗಾರ ಮಾಡಿದರೆ ಏನು ಉಪಯೋಗ.

**ಮೂಮು**

ಹಾಗಲ್ಲ ತಾಯೆ, ನಿನ್ನಿಂದಲೇ ಅವಳಲ್ಲವೆ ? ನೀನು ಚೆನ್ನಾಗಿದ್ದರೆ ಅವಳೂ ತೃಪ್ತಿಯಿಂದ ಇರುತ್ತಾಳೆ.

**ವಣದೇವತೆ**

ಅದು ನಿಜ, ಮಗು ಮೂಮು. ಆದರೆ ನನ್ನ ಶೃಂಗಾರವು ಅರಗಳಿಗೆ ಯಲ್ಲಿಯಾಗಲಾರದು. ಮಾತು ಬೆಳೆದಷ್ಟು ಬೇಗ ಮರವು ಬೆಳೆಯಲು ಸಾಧ್ಯವೆ ?

**ತಿಂಮ**

ಅಲ್ಲವೇ ಮತ್ತೆ ? ಮೀಸೆ ಬೆಳೆದಷ್ಟು ಜಾಗ್ರತಿ ಮೆದಳು ಬೆಳೆಯಲು ಸಾಧ್ಯವೇ ?

**ಮೂಮು**

ಮುಚ್ಕೋ ಬಾಯಿ, ಸಾಕು ನಿನ್ನ ಅಧಿಕಪ್ರಸಂಗ.

**ವಣದೇವತೆ**

ಮೊದಲೆಲ್ಲರೂ ಸೇರಿ ಇವಳನ್ನು ಉಳಿಸಿಗೊಳ್ಳಿರಿ. ಇವಳಿಗೆ ಮಾತ್ರ ತೃಪ್ತಿ ಇಲ್ಲದಿದ್ದರೆ ಅನಾಹುತವು ತಪ್ಪದು. ಮಗೂ ಮೂಮು, ನಿನ್ನ ಮನ ವನ್ನು ಇನ್ನೂ ನಾನರಿಯೆನಾದರೂ ನಿನ್ನ ಮಾತುಗಳನ್ನು ಕೇಳಿರುವೆ. ನಿನ್ನ ಮಾತುಗಳು ಬಹು ಚೆನ್ನಾಗಿವೆ, ಆ ಒಬ್ಬಿಬ್ಬರಂತೆ ವರಟು ಇಲ್ಲ.

**ಮೂಮು**

ನಾನು ಬರಲೇ ತಾಯೆ ?

**ವಣದೇವತೆ**

ಹೋಗಿ ಬಾ ಮಗು. ನೀನು ನೆಟ್ಟ ಮರಗಳು ಬೆಟ್ಟದ ಮೇಲೆ ಬೆಳೆಯಲಿ.

**ತಿಂಮ**

ಮಾತಿನ ಮರವು ಮಾತ್ರ ಮುರಿದೇ ಬೀಳಲಿ. ಬೊಲೋ ಮಾಮು ಮಹಾರಾಜಕೀ ಜೈ ! ಅನ್ನದಾತಕೀ ಜೈ, ಚಪಾತಿದಾತಕೀ ಜೈ. ಎಲೆ ಪಲ್ಲೆದಾತಕೀ ಜೈ !

( ಎರಡೂ ಬದಿಗಳಿಂದ ಬಂದು ಸೇರಿ ತೆರೆ ಮುಚ್ಚುವದು. )

# ಭಗವಂತನ ಭವಿಷ್ಯ

## ಪಾತ್ರಗಳು

೧. **ಭಗವಂತ** ಬಡತನದ ಭೂತ ಬಡಿದುಕೊಂಡ ನಿರ್ಭಾಗ್ಯಶಾಲಿ.

೨. **ದಾಮೋದರ** ಅದೇ ಸ್ಥಿತಿಗತಿಯ ಬಾಲಸ್ನೇಹಿತ.

೩. **ಲಕ್ಷ್ಮಿ** ಭಗವಂತನ ಅರ್ಧಾಂಗಿ; ಸಾಕ್ಷಾತ್ ದರಿದ್ರದೇವತೆ.

## ೧

( ಊರಿನ ರಸ್ತೆ. ಉಚಿತ ವಾಚನಾಲಯದಿಂದ ಕೈಚೀಲ ಹಿಡಿದು ಹೊರ ಬಿದ್ದ ಭಗವಂತನು, ಗಾಳಿಯಲ್ಲಿ ತೇಲುವವನಂತೆ ಆನಂದಾವೇಶದಲ್ಲಿ ಓಟ ಬಿಟ್ಟಿದ್ದಾನೆ ಏನೂ ಕಾಣುವಂತಿಲ್ಲ ಅವನಿಗೆ. ಹಿಂದೆ ಬರುತ್ತಿದ್ದ ದಾಮೋದರನು ಕೂಗಿ ಕೂಗಿ, ಓಡಿಬಂದು ಅಡ್ಡಗಟ್ಟಿ ಮಾತನಾಡಿಸುತ್ತಾನೆ. )

### ದಾಮೋದರ

(ಕಿವುಡರನ್ನು ಕೆಣಕುವ ದನಿಯಲ್ಲಿ) ನಮಸ್ಕಾರ ಭಗವಂತರಾಯರೇ, ಈ ಯುದ್ಧಕಾಲದಲ್ಲಿಯೂ ರಾಯರಿಗೆ ಅಷ್ಟೊಂದು ಕ್ವೈನಾ-ಗಿಯ್ನಾ ಎಲ್ಲಿಂದ ದೊರಿ-ಗಿರೀತೂ—ಅಂತ.

### ಭಗವಂತ

ಏನೋ ದಾಮೂ, ನಿನ್ನ ಚೇಷ್ಟೆ ? ಕ್ವೈನಾ ಎಲ್ಲಿದೆಯೋ ?

### ದಾಮೋದರ

ಅಲ್ಲ, ಕಿವಿ-ಗಿವಿ ಪೂರ್ತಿ....

### ಭಗವಂತ

ಕಿವಿಗೇನಾಗಿದೆಯೋ, ಚೆನ್ನಾಗಿಯೇ ಕೇಳುತ್ತೆ. ಇರಲಿ ಬಾ. ಅನಾಯಾಸವಾಗಿ ಎದುರಿಗೆ ಬಂದಿದೀಯಾ, ಒಂಟಿ ಬ್ರಾಹ್ಮಣ. ಈ ರಸ್ತೆಯ ತುದಿ ಗಿರುವ '**ನರೇಂದ್ರಭವನ**'ದಲ್ಲಿಷ್ಟು ಕಾಫೀ ಕುಡಕೊಂಡು ಹೋಗೋಣ.

### ದಾಮೋದರ

ಏನೋ ಅನಾಹುತ-ಗಿನಾಹುತ ಇದೆ. ಇದೇಕಪ್ಪಾ ಒಮ್ಮೆಲೇ ಕುಚೇಲಾವತಾರದಿಂದ ಕರ್ಣಾವತಾರಕ್ಕೆ ಬಂದಿ ? ಏನಾದರೂ ವಿಶೇಷ-ಗಿಶೇಷ ? ಯಾವುದಾದರೂ ಬೇಟಿ-ಗೀಟಿ ?

### ಭಗವಂತ

ಛೆ, ಛೆ, ಅದೂ ಈ ದಿವಸದಲ್ಲಿ !

### ದಾಮೋದರ

ಮತ್ತೇನು............ಆಫೀಸ-ಗೀಫಿಸಿನಲ್ಲಿ ಸಂಬಳ-ಗಿಂಬಳದ ಬಡತಿ-ಗಿಡತಿ ?

**ಭಗವಂತ**

ಇನ್ಯಾರಿಗೆ ಬೇಕಯ್ಯಾ ಸಂಬಳ ?

**ದಾಮೋದರ**

ಯಾವುದಾದರೂ ದೂರದ ಅಜ್ಜಿ-ಗಿಜ್ಜಿ ಸತ್ತು-ಗಿತ್ತು, ಆಸ್ತೀ-ಗೀಸ್ತಿ-ಬಂದುಗಿಂದಿತೇನೋ ಭಗವಂತ ?

**ಭಗವಂತ**

ಹಾಗೇನೂ ಇಲ್ವೊ ದಾಮು. ಮನಸ್ಸಿನಲ್ಲಿ ಬಂದಿದೆ, ಕೊಡಿಸ್ತೇನಿ, ಅಷ್ಟೆ!

**ದಾಮೋದರ**

ಸರಿ, ಹೊಸದಾಗಿ ವಿಮಾ-ಗಿಮಾ ಕಂಪನಿಯ ಏಜನ್ಸಿ-ಗೀಜನ್ಸಿ ತೆಗೆದು-ಗಿಗಿದುಕೊಂಡಿದೀಯಾ, ಏನು ಸಮಾಚಾರ ? ಮೇಲೆಬಿದ್ದು ಕಾಫೀ-ಗೀಫೀ ಕೊಡ-ಗಿಡಸ್ತೀಯಾ ?

**ಭಗವಂತ**

ಅಂಥಾದೇನೂ ಇಲ್ಲ ಮಹಾರಾಯಾ.

**ದಾಮೋದರ**

ಒಹೋ, ಪುತ್ರ-ಗಿತ್ರ ಜನನ-ಗಿನನವೇ ?

**ಭಗವಂತ**

ಸರಿ ! ಅದು ಒಂದೇ ನೋಡು ಆಗಬೇಕಾದದ್ದು. ಒಂಭತ್ತು ತಿಂಗಳಿನ ಹನ್ನೊಂದನೇ ಮಗು ಕೈಯ್ಯಲ್ಲಿದೆ; ಮನೆಯಲ್ಲಿ ಮತ್ತೆ ಮೂರು ತಿಂಗಳು ಸದ್ಯ.

**ದಾಮೋದರ**

ಹಾಗಾದರೆ ಏಕಯ್ಯಾ ಈ ಸಡಗರ-ಗಿಡಗರ ಅಂತ ?

**ಭಗವಂತ**

ಇದೆ, ಒಂದು ಕಾರಣ.

**ದಾಮೋದರ**

ಅದನ್ನೇ ಮಹಾಸ್ವಾಮೀ, ಈ ಬಾಲಕನು ಶಿರ-ಗಿರ ಬಾಗಿ ಕರ-ಗಿರ ಒಡ್ಡಿ ಕೇಳಿ-ಗೀಳಿಕೊಳ್ಳುತ್ತಿರುವುದು ! ಹೇಳಯ್ಯಾ ಏನು ಸಮಾಚಾರ-ಗಿಮಾಚಾರ ಅಂದ್ರೆ, ಅದೇನೋ ದೊಡ್ಡ-ಗಿಡ್ಡ ಸ್ತಿಗೆ ಮಾಡಗೀಡ್ತಿದಾನೆ.

**ಭಗವಂತ**

ಏನೂ ಇಲ್ಲಪ್ಪಾ........

**ದಾಮೋದರ**

ಹಾಗಾದರೆ ಈ ಕಾಫೀ-ಗೀಫೀ ಏಕಪ್ಪಾ ?

**ಭಗವಂತ**

ಬರಿ ಅಷ್ಟೆ ಅಲ್ಲ ದಾಮು ! ನೀನು ನಮ್ಮ ಮನೆಗೆ ಊಟಕ್ಕೂ ಬರಬೇಕು. ಸೀ ಊಟ.

**ದಾಮೋದರ**

ನಿನ್ನ ತಮಾಷೆ-ಗಿಮಾಷೆ ನನಗೆ ಅರ್ಥ-ಗಿರ್ಥ ಆಗೂದಿಲ್ಲ. ಸಂದರ್ಭ-ಗಿಂದರ್ಭ........

**ಭಗವಂತ**

**(ಹಸನ್ಮುಖಿಯಾಗಿ)** ತಾರಯ್ಯ ಕೈ; **(ಆವೇಶದ ಭಾಷಣಕಾರನಂತೆ)** ಭಗವಂತನ ತಾಪತ್ರಯಗಳು ಹಿಂದಾದವು. ಆ ಹರಕು ಅಂಗಿಯ ಮುರುಕು ಮನೆಯ ಹಸಿವೆಯ ದರಿದ್ರ ಭಗವಂತನು ಮಾಯವಾದ. ಇನ್ನು ನೀನು ಕಾಣುವುದು ಸಿರಿವಂತ ಭಗವಂತನನ್ನು. ನನ್ನ ಮನೆಯವಳು—ಸಾಕ್ಷಾತ್ ಲಕ್ಷ್ಮಿ, ಇನ್ನು ಮೇಲೆ !

**ದಾಮೋದರ**

ಈ ಸಾಕ್ಷಾತ್-ಗೀಕ್ಷಾತ್ ಎಲ್ಲಾ ಬೇಡ ನನಗೆ! ಇದ್ದ ವಿಷಯ-ಗಿಷಯ ಹೇಳ್ತೀಯೊ, ಅಥವಾ ಪೋಲೀಸ್ರು-ಗೀಲೀಸ್ರನ್ನುಕರೆದು ಹುಚ್ಚು-ಗಿಚ್ಚಾಸ್ಪತ್ರೆಗೆ ಹೊಗಿಸಲೊ ?

**ಭಗವಂತ**

ನೋಡಿದ್ದೇನಯ್ಯಾ ವಾರಭವಿಷ್ಯ; ಉಚಿತವಾಚನಾಲಯದಿಂದಲೇ ಬರುತ್ತಿದ್ದೇನೆ ಈಗ.

**ದಾಮೋದರ**

ಏನು-ಗೀನಿದೆಯೋ ಭಗವಂತ ?

**ಭಗವಂತ**

**(ಹಿರಿಹಿರಿ ಹಿಗ್ಗುತ್ತ)** ಸ್ತ್ರೀಯಿಂದ ಧನಲಾಭ !

### ದಾಮೋದರ

(ಸಂತೋಷಾಶ್ಚರ್ಯಗಳಿಂದ) ಆ ! ಧನ-ಗಿನ ಲಾಭ !! ಅದೂ ಸ್ತ್ರೀ-ಗೀಯಿಂದ!!!

### ಭಗವಂತ

ದೈವ ಅಂದ್ರೆ ಇದು ನೋಡೋ ದಾಮು. ಹಣ ಬಂದ ಕೂಡ್ಲೆ ಚಿಕ್ಕ ಪುಟ್ಟ ಸಾಲಗಳನ್ನೆಲ್ಲ ತೀರಿಸಿಬಿಟ್ಟು, ಮಕ್ಕಳನ್ನೆಲ್ಲಾ ಕಾನ್ವೆಂಟಿನಲ್ಲಿಟ್ಟು, ಊರಹೊರಗೊಂದು ಅರಮನೆ ಕಟ್ಟಿಸಿಕೊಂಡು, ಒಂದು ಒಳ್ಳೇ ಕಾರಿಟ್ಟು ಕೊಂಡು ಹಾಯಾಗಿದ್ಬಿಡ್ತೇವೆ.

### ದಾಮೋದರ

ಆಫೀಸು-ಗೀಫೀಸು ?

### ಭಗವಂತ

ಇನ್ನೇಕಯ್ಯಾ ಆ ದರಿದ್ರದಾಸ್ಯ ? ಅಂತೂ ನಲವತ್ತು ವರ್ಷದ ಅಷ್ಟ ದಾರಿದ್ರ್ಯ ಒಂದೇ ವಾರಭವಿಷ್ಯದಲ್ಲಿ ಓಡಿತು ಸದ್ಯ. ಸ್ತ್ರೀಯಿಂದ ಧನಲಾಭ ! ಬಾರೋ ದಾಮು. ಬಂದಿತಲ್ಲ ನರೇಂದ್ರಭವನ. ಏನ್ಬೇಕೆಲ್ಲಾ ತಿಂದ್ಹಾಕಿ ಬಿಡು. ಕಂಚಿ ಇಡ್ಲಿ, ಉಡಿಪೀ ಉಪ್ಪಿಟ್ಟು, ಮೈಸೂರು ಮಸಾಲೆದೋಸೆ, ಬೊಂಬಾಯಿ ಬಾಸುಂದಿ, ಲಕ್ನೊ ಲಾಡು, ಪಟ್ಟಣಂ ಪಕೋಡಂ, ಧಾರವಾಡದ ಫೇಡೇ; ಬಳ್ಳಾರಿ ಬೂಂದಿ.

### ದಾಮೋದರ

ತಿನ್ನೋದು-ಗಿನ್ನೋದು ಎಲ್ಲಾ ಸರಿ; ಈಗ ಕೊಡ-ಗಿಡಲಿಕ್ಕೆ ಬೇಡವೇ ಹಣ-ಗಿಣ ?

### ಭಗವಂತ

ಇದೆಯಪಾ (ಕಿಸೆಯನ್ನು ಬಾರಿಸಿ), ಕೊಟ್ಟಿದ್ದಾಳೆ ನನ್ನ ಲಕ್ಷ್ಮಿ ತರಕಾರಿ ತರಲಿಕ್ಕೆ. ಚಿಲ್ರೆ ಇಲ್ಲ ಎಂದು ರೂಪಾಯಿ ಕೊಟ್ಟಿದ್ದಾಳೆ, ರೂಪಾಯಿ.

### ದಾಮೋದರ

ಇದೆಲ್ಲಾ ಮುಗಿಸಿ-ಗಿಗಿಸಿ ರಾತ್ರಿ-ಗೀತ್ರೀ ಊಟ-ಗೀಟಕ್ಕೆ ಬೇರೆ ಬರ-ಗಿರ ಬೇಕೇ ?

### ಭಗವಂತ

ತಪ್ಪದೆ ಬಾರಯ್ಯಾ, ದೇವರು ಕೊಟ್ಟ ಕಾಲಕ್ಕೂ ಬೇಡವೆ ? ಸ್ತ್ರೀಯಿಂದ ಧನಲಾಭ ! ( ಆನಂದದಲ್ಲಿ ಮೈಮರೆತು ಇಬ್ಬರೂ ನಗುವರು )

## ೨

( ಭಗವಂತನ ಮನೆ. ಅವನ ಗೃಹಲಕ್ಷ್ಮಿ ಮನೆಗೆಲಸದಲ್ಲಿ ತೊಡಗಿದ್ದಾಳೆ. ಹರುಕುಮುರುಕು ಚಿಂದೆ ಚಾಪಿ, ಅಸ್ತವ್ಯಸ್ತವಾಗಿ ಮನೆತುಂಬ ಬಿದ್ದಿವೆ. ಭಗವಂತನ ಪ್ರವೇಶ. )

### ಲಕ್ಷ್ಮಿ

( ಅಣಕಿನ ದನಿಯಲ್ಲಿ ) ಸಧ್ಯ ಬಂದಿರಾ ಮನೆಗೆ, ಇವತ್ತಿನೊಳಗೆ ?

### ಭಗವಂತ

ಏನೇ ಹಾಗಂತಿದೀಯಾ ? ಬರದೆ ಎಲ್ಲಿಗೆ ಹೋಗ್ತೇನೆ ?

### ಲಕ್ಷ್ಮಿ

ಯಾರಿಗೆ ಗೊತ್ತು ? ಎಲ್ಲಿಗೆ ಹೋಗ್ತೀರೀ ಅನ್ನೋದು ನಿಮಗೆ ಗೊತ್ತಿದ್ರೆ ತಾನೆ ? ಏನು, ಇಷ್ಟೊತ್ತೆ ? ಬೀಜಬಿತ್ತಿ, ಹಿಮಾಲಯಕ್ಕೆ ಹೋಗಿ ತಪಸ್ಸು ಮಾಡಿ ಮಳೆ ತರಿಸಿ, ತರಕಾರಿ ಬೆಳೆದು ತಂದಿರೋ ಏನು ಗತಿ ?

### ಭಗವಂತ

ಆದದ್ದಾದರೂ ಏನೇ ಈಗ ?

### ಲಕ್ಷ್ಮಿ

ಇನ್ನೇನಾಗ್ಬೇಕಂತೆ ? ಅವಸರದಲ್ಲಿ ನಿಮ್ಮನ್ನೇ ನಂಬಿ ಕೂಡಬೇಕು ನೋಡಿ. ಬಾವಿಯಲ್ಲಿ ಬಿದ್ದವರನ್ನ ತಗಿಯೋಕೆ ಹಗ್ಗಾ ತರಲಿಕ್ಕೆ ಕಳಿಸಬೇಕು ನಿಮ್ಮನ್ನ.

### ಭಗವಂತ

ಏನೇ, ಹಾಗೆ ಸಿಡಿಪಿಡಿ ಸುರುವು ಮಾಡಿಬಿಟ್ಟೀಯಾ ಮನೆಗೆ ಬಂದ ಕೂಡಲೇ ?

### ಲಕ್ಷ್ಮಿ

ಇನ್ನೇನಂತೆ ಮತ್ತೆ ? ಪಲ್ಲೆ ಇಲ್ಲ, ಕಾಯಿ ಇಲ್ಲ—ಎಂದು ಅರ್ಧ ಗಂಟೆ ಕಾದಾಡಿ, ಅಳ್ತಾ ಬರೀ ಸಾರು ಅನ್ನಾ ಉಂಡು ಶಾಲೆಗೆ ಮಕ್ಕಳು

ಪೋದುವು. ತರಕಾರಿ ತಂದು ಎಸೆದು ಹೋಗಿ, ಎಲ್ಲಾದರೂ ನಿಮ್ಮ ಬಚೇರಾಯನ ಕಂತೆಗೆ ಕುಳಿತಿದ್ದರೆ ಯಾರೇನು ಬೇಡಾ ಅನ್ತಿದ್ರೆ ? ಊಂ. ಇರಲಿ ಏಳಿ, ಮತ್ತೆ ಕೂಡ್ತೀರಲ್ಲಾ ಬೇರೆ ಮೂಲಿ ಹಿಡಿದು ! ಸ್ನಾನಕ್ಕೇಳಿ, ಗೊತ್ತೇ ಇದೆ. ಎಲೆಮೇಲೆ ಅನ್ನ—ತಲೆಮೇಲೆ ನೀರು. ಇನ್ನೂ ಆಫೀಸಿಗೆ ಹೊತ್ತಾಗ್ಲಿಲ್ವೇ ನಿಮಗೆ.

**ಭಗವಂತ**

ಇನ್ನೆಲ್ಲಿ ಆಫೀಸೆ ?

**ಲಕ್ಷ್ಮಿ**

ಏನು ಹಾಗಂದ್ರೆ. ಆಫೀಸಿಗೆ ಹೋಗಲ್ವೇನು ಇವತ್ತು ?

**ಭಗವಂತ**

ಇವತ್ತು ಅಲ್ಲ, ಇನ್ನು ಮೇಲಿಂದ—ಅಂದೆ....

**ಲಕ್ಷ್ಮಿ**

ಇನ್ನು ಮೇಲೆ ? ನಿಮಗೂ ಬಂದಿತೇನು, ಅದೇನೊ ಸಂಪು ಅನ್ನೋ ರೋಗ ? ಕಸಗುಡಿಸುವವರಿಂದ ಗಾಡೀ ನಡೆಸುವವರ ವರೆಗೂ ಸುರುವಾಗಿದೆಯಂತಲ್ಲಾ ! ಇರಲಿ ಏಳಿ, ಆ ಹುಚ್ಚುಚ್ಚೆಲ್ಲಾ ಬೇಡ; ಅದು ಏನೋ ಅಂದ್ಹಾಂಗಿದೆ; ಪಡೆದದ್ದು ಬಿಟ್ಟು ದುಡಿದದ್ದು ಕೇಳಿದರೂ ಅಂತ. ಊಟ ಮುಗಿಸಿ ಏನಾದರೂ ಮಾಡಿಕೊಳ್ಳಿ. ನಿಮ್ಮ ಇಷ್ಟ. ಅದೆಲ್ಲಾ ಇರಲಿ, ಸಧ್ಯ, ಒಲೆ ದಣದಣಾ ಉರೀತಾ ಇದೆ. ಸೌದೆ ಚಿನ್ನಾಗಿ ಕೂತಿದೆ.ತರಕಾರಿ ಕೊಡಿ ಮೊದಲು; ಕುಯ್ದಾದರೂ ಬೇಯಿಸ್ತೇನೆ.

**ಭಗವಂತ**

ಎಲ್ಲಿದೆ ತರಕಾರಿ ?

**ಲಕ್ಷ್ಮಿ**

**(ಮೊಳೆಗೆ ನೇತಾಡುತ್ತಿದ್ದ ಬರೀ ಚೀಲವನ್ನು ನೋಡಿ)** ಮತ್ತೇತಕ್ಕೆ ನೀವು ಮಾರ್ಕೀಟಿನಲ್ಲಿ ಹೋದದ್ದು ಅಂತ! ಕೋಳಿ ಕೂಗುತ್ತಲೆ ಹೋದವರು, ಬಿಸಿಲು ತಲೆಯ ಮೇಲೆ ಬಂದಮೇಲೆ ಬಂದ್ರೂನೂ ತರಕಾರೀ ತರಲಿಕ್ಕೆ ಆಗಲಿಲ್ಲವೆ ?

**ಭಗವಂತ**

ಮನೆಯಿಂದ ಹೊರಟದ್ದೇನೋ ತರಕಾರಿ ತರಲಿಕ್ಕೆ ಅಂತೆಯೇ.

**ಲಕ್ಷ್ಮಿ**

ಏನು ಅಷ್ಟರಲ್ಲಿಯೇ ಬೆಕ್ಕು ಅಡ್ಡಬಂದಿತೆ ?

**ಭಗವಂತ**

ಅಲ್ಲವೇ........

**ಲಕ್ಷ್ಮಿ**

ಸೌದೆ ಹೊರೆ ಎದುರು ಬಂದಿತೆ ?

**ಭಗವಂತ**

ಸರಿ, ಇದೇ ನೋಡು ನಿನ್ನದು—ಮಾತು, ಮಾತು, ಮಾತು ಮಾತು ! ಹೇಳುವವರೆಗೂ ಕೇಳಕೂಡದೆ ?

**ಲಕ್ಷ್ಮಿ**

ಏನೂ, ತರಕಾರೀ ಮಾರುವವರೂ ಸಂಪು ಮಾಡಿದ್ದಾರೆಯೆ ?

**ಭಗವಂತ**

ಗೃಹಚಾರ, ಎಲ್ಲ ಮಾತುಗಳನ್ನು ನೀನೇ ಆಡುವದಾಗಿದ್ದರೆ ಒಬ್ಬ ಮೂಕನನ್ನಾದರೂ ಮದುವೆಯಾಗಬಾರದಿತ್ತೆ ?

**ಲಕ್ಷ್ಮಿ**

ಇರಲಿ ಬಿಡಿ. ನಮ್ಮಪ್ಪನಿಗೆ ನಿಮ್ಮಷ್ಟು ತಿಳುವಳಿಕೆ ಎಲ್ಲಿಂದ ಬರಬೇಕು? ಪಾಪ ! ಅದೆಲ್ಲಾ ಹಳೆಯದಾಯಿತಲ್ಲ. ಹೋಗಲಿ ಬಿಡಿ, ನಾಳೆ ಮಗಳ ಮದಿವಿ ಮಾಡಬೇಕಲ್ಲಾ! ನೀವು ಕಟ್ಟಿಕೊಡಿ ಅವಳನ್ನ,ಅದೇನು ಮೂಕನಿಗೇ ಕೊಡುತ್ತೀರೋ ಕುರುಡನಿಗೇ ಕೊಡುತ್ತೀರೋ ತಿಳಿಯುತ್ತಲ್ಲಾ !

**ಭಗವಂತ**

ಇದ್ದೇಇದ್ದಾನಲ್ಲ ನಿನ್ನ ತಮ್ಮ ರಾಜ. ಮೂಕನಲ್ಲದಿದ್ದರೆ ಗುಕ್ಕ.

**ಲಕ್ಷ್ಮಿ**

ನಿಮ್ಮ ಯೋಗ್ಯತೆ ಏನಾಗುತ್ತೆ ಬಿಡಿ, ಅಂತಹ ಅಳಿಯನನ್ನು ತರುವುದು. ವರದಕ್ಷಿಣೆ ಸುರುವಬೇಡವೇ ಅವನೆತ್ತರ ? ಅದಿರಲಿ, ತರಕಾರೀಗೆ ಕೊಟ್ಟ ರೂಪಾಯಿ ಕೊಡಿ ಸಧ್ಯ. ಮೊಸರಿನವಳು ಮೂರುಸಲ ಎಡತಾಕಿ ರಂಪ ಮಾಡಿಹೋದಳು. ಕಡೆಗೆ ಪಕ್ಕದ ಮನೆಯ ಪದ್ದಮ್ಮನ ಹತ್ತಿರ ತಂದುಕೊಟ್ಟೆ. ಎಲ್ಲಿ ಆ ರೂಪಾಯಿ ಕೊಡಿ !

ಭಗವಂತ

ಎಲ್ಲಿಯ ರೂಪಾಯೋ ನೀನು ? ನಾನೂ ದಾಮೂ 'ನರೇಂದ್ರಭವನ' ದಲ್ಲಿ ತಿಂದು ಹಾಕಿದೆವು; ಉಳಿದ ಮೂರಾಣೆ ಕುದುರೆಗಾಡಿಗೆ ಕೊಟ್ಟು ಅವ ರಲ್ಲಿ ಮನೆಗೆ ಬಂದೆ.

ಲಕ್ಷ್ಮಿ

ಕುದುರೆಗಾಡಿ ! ಅಂತಹದೇನಾಗಿದ್ದಿತು ನಿಮಗೆ ?

ಭಗವಂತ

ಹೊಟ್ಟೆ ಭಾರ.

ಲಕ್ಷ್ಮಿ

ನಿಮಗೇನು ಮತಿ ಕೆಟ್ಟಿದೆಯೋ ಏನು ಗತಿ ? ನನ್ನ ಬಾಯಿಂದ ಒಳ್ಳೇ ಮಾತು ಬರೋಲ್ಲ ನೋಡಿ ಇನ್ನು ! ಅಲ್ಲಾ, ಬಿಡಿಕಾಸಿಗೆ ಜಾಣತನ ಮಾಡಿ ಈ ಕಷ್ಟಕಾಲದಲ್ಲಿ ನಾನು ಸಂಸಾರ ಮಾಡ್ತೇನೆ; ಮಕ್ಕಳನ್ನು ಮಾರ್ಕೀಟಿಗೆ ಕಳಿಸಿದರೆ ಕಾಸು ಕದೀತಾರೇ ಅಂತ ನಿಮಗೆ ಕೊಟ್ರೆ, ಒಂದು ರೂಪಾಯಿ ತಿಂದು ಬರೋದಾ ? ಏನ್ರೀ ಅಂತಹ ದೌಲತ್ತು ಬಂದಿರೋದು ನಿಮಗೇ,— ಅಂತ ಕೇಳ್ತೀನಿ ! ಏನು ಅಂತಹ ಐಶ್ವರ್ಯ ಅಳತಾ ಇದೆಯೆ ?

ಭಗವಂತ

ಅಯ್ಯೋ ಹುಚ್ಚಿ ಹುಚ್ಚೀ, ಇದಕ್ಕೇ ನೋಡು ಹೆಣ್ಣುಬುದ್ಧಿ ಎನ್ನೋದು ! ತರಕಾರಿ ತರಲಿಲ್ಲಂತೆ ರೇಗಾಡ್ತಾಳೆ ಆವಾಗಲಿಂದ. ಸೇರುಗಟ್ಟಲೆ ಸೌತೇಕಾಯಿ ಬದನೆಕಾಯಿ ಅಲ್ವೇ ಧಡ್ಡೀ ! ಮಣಗಟ್ಲೆ ಚಿನ್ನ ಬೆಳ್ಳಿ ತರ್ತೀನಿ ತಿಳೀತೇನೇ—ನನ್ನ ವೈಡೂರ್ಯ ?

ಲಕ್ಷ್ಮಿ

ಇದೇನು ? ಹೀಗಾಗಿ ಬಂದ್ರಿ ಮನೆಗೆ ಇವತ್ತೂ ? ಯಾರಾದರೂ ತಲೆ ಗೇನಾದರೂ ತಿಕ್ಕಿದರೋ ಏನು ಮಣ್ಣೋ ಮತ್ತೆ !

ಭಗವಂತ

ಅಯ್ಯೋ ದರಿದ್ರ, ನನಗೇನೂ ಆಗಿಲ್ವೆ. ನಿಜ ಸಂಗತಿ ಹೇಳಿದರೆ ನಿನಗೇ ಹುಚ್ಚು ಹಿಡಿಯುತ್ತೆ ಈಗ ! ನನ್ನ ರಾಶಿ ವೃಷಭ ಅಲ್ವೇನೇ ಚಿನ್ನಾ, (ಹಿಗ್ಗುವನು).

**ಲಕ್ಷ್ಮಿ**

ಸರಿ; ಈಗ ನನಗೆ ಪೂರ್ತಿ ಖಾತ್ರಿಯಾಯಿತು—ನಿಮ್ಮ ತಲೆ ಕೆಟ್ಟಿದೆ ಎಂದು. ನನಗೆ ಎಂದೋ ಗೊತ್ತು ಹೀಗಾಗುತ್ತೆ ಅಂತ. ಮೊದಲೇ ಪಿತ್ತ ಪ್ರಕೃತಿ. ಸಾಲದ್ದಕ್ಕೆ ಜೇಬಿನಲ್ಲಿ ಕಡಲೆಕಾಯಿ ತುಂಬಿ ಹಸಿದ ಹೊಟ್ಟೆಯಲ್ಲಿ ತಿನ್ನೋದು. ಮೇಲೆ ಗಂಟೆಗೊಮ್ಮೆ ಆ ದರಿದ್ರ ಕಾಫಿ ಬೇರೆ. ( ಒಳಗೆ ಹೋಗುತ್ತ ) ನಿಲ್ಲಿ, ಒಂದು ನಾಲ್ಕು ಕೊಡ ತಣ್ಣೀರಾದರೂ ಎರಚ್ತೀನಿ ತಲೆಯಮೇಲೆ.

**ಭಗವಂತ**

( ಓಡಿ ಅಡ್ಡ ಬಂದು ) ಕೊಂಚ ನಿಲ್ಲೇ ಮಹರಾಯತೀ ! ನಿಜವಾಗಿಯೂ ಹುಚ್ಚೇ ಹಿಡಿಸಿಬಿಟ್ಟೀ ಆಮೇಲೆ ! ದಯವಿಟ್ಟು ನನ್ನ ಮಾತು ಕೇಳು !

**ಲಕ್ಷ್ಮಿ**

ಹೂಂ, ಹೇಳಿ ಹಾಗಾದರೆ.

**ಭಗವಂತ**

ಹಾ, ಹಾಗೆ ಹಾದೀಗೆ ಬಾ, ನನ್ನ ಬಂಗಾರ !!

**ಲಕ್ಷ್ಮಿ**

ಅಗೊ, ಸುರುವಾಯಿತೇ ಪುನಃ ?

**ಭಗವಂತ**

ಇಲ್ಲ, ಇಲ್ಲ ಮಹರಾಯತೀ, ವೃಷಭರಾಶಿಗೆ ವಾರಭವಿಷ್ಯ ಏನಿದೆ ಗೊತ್ತಿದೆಯೇ ? ( ನಿರುತ್ತರ. ಗೆದ್ದವನಂತೆ ) ಇಲ್ಲ ಇಲ್ಲ (ಪತ್ರಿಕೆಯನ್ನು ಮೇಲೇರಿಸಿ ) ಸ್ತ್ರೀಯಿಂದ ಧನಲಾಭ. ಇದೇ ವಾರದಲ್ಲಿ. ಈ ವಾರದಲ್ಲಿ ಇಂದೇ ಕಡೆಯ ದಿನ. ಇಂದು ಆಗಲೇಬೇಕು ಧನಲಾಭ !

**ಲಕ್ಷ್ಮಿ**

( ಉತ್ಸಾಹದಲ್ಲಿ ) ನಿಜವಾಗಿಯೂ ನಿಜವೇನ್ರಿ ?

**ಭಗವಂತ**

ಅಯ್ಯೋ ಹುಚ್ಚಿ, ವಾರಭವಿಷ್ಯ ಎಲ್ಲಾದರೂ ಸುಳ್ಳಾಗುತ್ತೆಯೆ ?

**ಲಕ್ಷ್ಮಿ**

ಹಾಗಾದರೆ ಹಿಂದೆ ಹೇಳಿದ್ದುದೆಲ್ಲವೂ ನಿಜವೇ ಆಗಿದೆಯೇ ?

**ಭಗವಂತ**

ಒಂದಲ್ಲ, ಒಂದು ಸಹಸ್ರ. ಮೊದಲನೆಯ ವಾರದಲ್ಲಿ ಬಂಧುಮಿತ್ರರ ಭೇಟಿ--ಕೈಯಲ್ಲಿ ಹಣವಿರುತ್ತದೆ. ಮನಸ್ತಾಪ-ಕೊಡುವುದಿಲ್ಲವೆಂದರೆ ಆ ಮೇಲೆ ಇಡೀ ತಿಂಗಳು ಆರ್ಥಿಕ ದುಃಸ್ಥಿತಿ—ಬಂದ ಸಂಬಳವೆಲ್ಲವೂ ಮುಗಿದಿರುತ್ತದೆ. ಕಡೆಯ ವಾರವಲ್ಲಿ ಗೃಹಕಲಹ, ಒಮ್ಮೆಲೆ ದೈವ ಭಕ್ತಿ—ಕೈಯಲ್ಲಿ ಬಿಡಿಕಾಸು ಇಲ್ಲದುದರಿಂದ. ವರ್ಷಫಲ ಕೇಳಿಲ್ಲವೇ ನೀನು ? ಬಡವರಿಗೆ ಸದಾ ದಾರಿದ್ರ್ಯ; ಆದರೆ ಸ್ತ್ರೀಸುಖ ಉತ್ತಮ. ಪುತ್ರ--ಪೌತ್ರ ಪ್ರಾಪ್ತಿ ಮಾನ ಹೋಗುವ ಸಂಭವವಿದೆ, ಪರಂತು ಹೋಗುವದಿಲ್ಲ; ಕಾರಣ ಹೋಗಲು ಅಲ್ಲಿ ಏನೂ ಇಲ್ಲ. ಚೈತ್ರ, ವೈಶಾಖ, ಜ್ಯೇಷ್ಠ—ಕೈಗಾರಿಕೆ ಲಾಭಕರ, ಬೇಸಿಗೆಯಲ್ಲಿ ಬೀಸಣಿಕೆಗಳ ಮಾರಾಟ ಹೆಚ್ಚುವುದು. ಚಿಲ್ಲರೆ ವ್ಯಾಪಾರಿಗಳಿಗೆ ಉತ್ತಮ. ಸೋಡಾ, ಡ್ರಿಂಕು, ಐಸು, ಅಂಗಡಿಗಳಿಗೆ ವ್ಯಾಪಾರ ಹೆಚ್ಚು. ಆಷಾಢ-ಶ್ರಾವಣ ಮಾಸಗಳಲ್ಲಿ ನಿದ್ರಾ ಹಾನಿ, ಮಳೆಬಂದು ಮನೆ ಸೋರುತ್ತೆ. ಭಾದ್ರಪದ-ಭಕ್ಷ್ಯ ಭೋಜನಗಳು, ಅಜೀರ್ಣಾದಿ ರೋಗಗಳು. ಪಕ್ಷಮಾಸ ಮತ್ತು ದಸರಾ ಹಬ್ಬವಾದ್ದರಿಂದ. ಕಾರ್ತೀಕ ಮಾಸ, ಬೆಳ್ಳಿ ಚಿನ್ನ ಬಟ್ಟೆ ಅಂಗಡಿಗಳಿಗೆ ವ್ಯಾಪಾರ ಹೆಚ್ಚು. ದೀಪಾವಳಿಯ ಅಳಿಯಂದಿರ ಉಡುಗೊರೆಯ ಸುಲಿಗೆ. ಎಣ್ಣೆಯ ಬೆಲೆ ಏರುವುದು, ದೀಪಗಳು ಹೆಚ್ಚಾಗುವುವು. ಪುಷ್ಯ ಮಾಘ—ದಾಹ ಕಡಿಮೆ, ಚಳಿಗಾಲವಾದ್ದರಿಂದ....

**ಲಕ್ಷ್ಮಿ**

ಅಯ್ಯೋ, ಅದೆಲ್ಲಾ ಹಾಳಾಗಲಿ ಬಿಡಿ ಅಂದ್ರೆ, ನಿಜವಾಗಿಯೂ ಹಣ ಸಿಕ್ಕುತ್ತೆ ಏನ್ರೀ ಇವತ್ತು ?

**ಭಗವಂತ**

ಇನ್ನೂ ಅನುಮಾನವೆ ನಿನಗೆ ?

**ಲಕ್ಷ್ಮಿ**

ಅನುಮಾನವೇನಿಲ್ಲ ಬಿಡಿ, ಆದರೆ ಎಷ್ಟೂ ಅಂತ ?

**ಭಗವಂತ**

ಎಷ್ಟೂ ? ರೂಪಾಯಿಗಳೋ ನೋಟುಗಳೊ ? ನೋಟುಗಳಾದರೆ ಹತ್ತರವೋ ಚಿಲ್ಲರೆ ನೂರರವೊ ? ಏನೇನು ನಂಬರು ?—ಇದೆಲ್ಲಾ ವಾರ

ಭವಿಷ್ಯದಲ್ಲಿ ಹೇಳಲಿಕ್ಕಾಗುತ್ತೆ ಏನೇ ? ಧನಲಾಭ ಅಂತ ಇದೆ; ಸಾಲವೆ ? ರಾತ್ರಿಯವರಿಗೆ ಜೀವ ಬಿಗಿಹಿಡಿಯಬಾರೆಯ ?

**ಲಕ್ಷ್ಮಿ**

ಇನ್ನೇನ್ಸಾಪತ್ರ್ರಯ ಬಿಡಿ ನಮಗೆ; ನಮ್ಮ ಕುಮುದಾನ್ನ ರಾಜನಿಗೆ ಮದುವೆಮಾಡಿ ಬಿಡೋಣ. ಏನ್ರಿ ?

**ಭಗವಂತ**

ವರದಕ್ಷಿಣೆ ಕೊಡೋಕೆ ನಿಮ್ಮ ಕೈಯಿಂದ ಏನಾಗುತ್ತೆ ಅಂದೆಲ್ಲೇ !

**ಲಕ್ಷ್ಮಿ**

ಏನೋ ಮಾತಿನ ಸಂದರ್ಭ, ಅಂದಿದ್ದರೂ ಅಂದಿರ ಬಹುದು. ಹೆಂಗಸರು ಆಡಿದ್ದನ್ನೆಲ್ಲಾ ಮನಸ್ಸಿನಲ್ಲಿಡಬೇಕೆ ? ಅದಿರಲಿ, ಮದುವೆಯ ಜವಳಿ, ಈ ದರಿದ್ರ ಊರಿನಲ್ಲಿ ತೆಗೆಯೋದು ಬೇಡ ಸದ್ಯ. ನೂರು ಎರಡು ನೂರು ಹೆಚ್ಚು ಹೋದರೂ ಪರವಾಯಿಲ್ಲ, ಬೆಂಗಳೂರಿಗೆ ಹೋಗಿಯೇ ತರೋಣವಂತೆ !

**ಭಗವಂತ**

ಈಗ ಹೇಗೇ ರೈಲಿನಲ್ಲಿ ಹೋಗುವುದು ? ಒಂದು ಉಪಾಯ ಮಾಡೋಣ ಹಾಗಾದ್ರೆ. ಹೋಗುವಾಗ ಫಸ್ಟ್ ಕ್ಲಾಸಿನಲ್ಲಿ ಹೋಗಿ, ಅಲ್ಲಿ ಒಂದು ಕಾರು ಬೆಲೆಗೆ ತೆಗೀತೇನೆ....

**ಲಕ್ಷ್ಮಿ**

ಹೌದು, ಹೇಗಾದರೂ ಬೇಕಲ್ಲ ಮೆರವಣಿಗೆಗೆ ?

**ಭಗವಂತ**

ಇನ್ನೊಂದು ಯೋಚನೇ ಮಾಡೀನಿ ಕಣೇ ?

**ಲಕ್ಷ್ಮಿ**

(ಆತುರದಿಂದ) ಏನ್ರೀ ಅದು ?

**ಭಗವಂತ**

ಊರ ಹೊರಗೆ ದೊಡ್ಡೊಂದು ಬಂಗ್ಲೆ ಮಾರಾಟಕ್ಕೆ ಬಂದಿದೆ. ಅದನ್ನು ತೆಗೆದುಕೊಂಡ್ರೆ....

**ಲಕ್ಷ್ಮಿ**

ಅಹುದು ಕಣ್ರೀ; ಮದುವೇ ಸಹ ಬಂಗಲೆಯಲ್ಲೇ ಮಾಡಬಹುದು!

**ಭಗವಂತ**

ವಿಠಲನ ಮುಂಜೀ ಕೂಡ ಈಗಲೇ ಮಾಡಿದರಾಯಿತು.

**ಲಕ್ಷ್ಮಿ**

ಅಷ್ಟೇಕಂತೆ ದರಿದ್ರ ? ನಮಗೇನು ದೇವರು ಕಡಿಮೆಮಾಡಿದಾನೆಯೇ? ಲಕ್ಷಣವಾಗಿ ಬೇರೆ ಮುಹೂರ್ತದಲ್ಲಿಯೇ ಮಾಡೋಣವಂತೆ ! ಅಹುದೂ.... ಕಿರಿವಿ ಇಟ್ಟ ನನ್ನ ನತ್ತೂ....

**ಭಗವಂತ**

ತರ್ತೀನೆಯೇ ಅದೆಲ್ಲಿ ಹೋಗುತ್ತೆ ! ಅಂತಹವು ಇನ್ನೂ ನಾಲ್ಕು ತರ್ತೀನೆ ಬೇಕಾದ್ರೆ. ನಿನ್ನ ಆ ಹಳೇತರಹದ ಅಡ್ಡಿಕೆ, ಗಿಡ್ಡಿಕೆ ಹೊರಗೆ ತೆಗೀಬೇಡ ಮಹಾರಾಯತಿ; ಆ ಮೇಲೆ ಬೀಗರು ನಕ್ಕಾರು.

**ಲಕ್ಷ್ಮಿ**

ಹಾಗಾದರೆ ಹೊಸ ಫ್ಯಾಷನ್ನಿನ ಚೈನು ಮಾಡಿಸಿಕೊಡಿ !

**ಭಗವಂತ**

ಹೂಂ.

**ಲಕ್ಷ್ಮಿ**

ರೇಡಿಯೋ ಬಳೆ ?

**ಭಗವಂತ**

ಹೂಂ.

**ಲಕ್ಷ್ಮಿ**

ಚಿನ್ನದ ಡಾಬು ?

**ಭಗವಂತ**

ಹೂಂ.

**ಲಕ್ಷ್ಮಿ**

ವಜ್ರದ ಬೆಂಡೋಲೆ ?

**ಭಗವಂತ**

ಹೂಂ.

### ಲಕ್ಷ್ಮಿ

ಗಂಡು ಮಗೂಗೆ ಭೂಷಣವಾಗಿರುತ್ತೆ; ಒಂದರಳೆಲೆ ಉಂಗುರ ತನ್ನಿ.

### ಭಗವಂತ

ಯಾವುದೇ ಮಗು ?

### ಲಕ್ಷ್ಮಿ

ನೀವಂತೂ, ಬೇಡವೇ ನಾಳೆ ರಾಜಾ ಕುಮಾರನಾಗೆ ಮಗುವಾದರೆ !

(ಇಬ್ಬರೂ ಮನಸದಣಿಯೆ ನಗುವರು)

### ೩

(ರಾತ್ರಿ ಹತ್ತು ಗಂಟೆಯಾಗಿದೆ. ಭಗವಂತನ ಮನೆಯಲ್ಲಿ ಹಬ್ಬದ ಕಳೆ. ಹಳೆಯದೇ ಆಗಿದ್ದ ಹೊಸ ಸೀರೆಯನ್ನುಟ್ಟು ಲಕ್ಷ್ಮಿ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದಾಳೆ. ಮಕ್ಕಳೆಲ್ಲವೂ ಹರಕು ಕಂಬಳಿಯ ಮೇಲೆ ಮಲಗಿವೆ. ಗಲ್ಲಕ್ಕೆ ಕೈಕೊಟ್ಟು ಕುಳಿತ ಭಗವಂತನು ಧನಲಾಭ ತರುವ ಸ್ತ್ರೀಯ ನಿರೀಕ್ಷಣೆಯಲ್ಲಿದ್ದಾನೆ. ಒಳಬಾಗಿಲಲ್ಲಿ ದಾಮೂ.)

### ದಾಮೋದರ

ಭಗವಂತಾ........ ಇದೇನಪ್ಪಾ ಉತ್ತರ-ಗಿತ್ತರ ಏನೂ ಇಲ್ಲ ? ಯಾರಾದರೂ ಇದ್ದು-ಗಿದ್ದಾರೆಯೋ ಇಲ್ಲ-ಗಿಲ್ಲವೋ ಮತ್ತೆ?(ಗಟ್ಟಿಯಾಗಿ) ಭಗವಂತಾ

### ಭಗವಂತ

(ಚಕಿತನಾಗಿ) ಬನ್ರಮ್ಮಾ, ಯಾರು ಅದು ? ಬನ್ನಿ ಒಳಗೆ !

### ದಾಮೋದರ

ಇದೇನಯ್ಯಾ, ಅಮ್ಮಾ-ಗಿಮ್ಮಾ ಅಂತು-ಗಿಂತಿದಾನೆ ಈ ಮನುಷ್ಯ? ದನಿ-ಗಿನಿ ಸಹ ಗುರುತು-ಗಿರುತು ಸಿಗ-ಗಿಗಲಿಕ್ಕಿಲ್ಲವೋ ಏನು ಮಂಣು-ಗಿಂಣು ? ನಾನೋ, ಭಗವಂತಾ ನಾನೂ !

### ಭಗವಂತ

ಎಲೇ, ಏನೇ ಮಾಡ್ತಾಯಿದ್ದೀ ? ಒಳಗೆ. ಬಾಗಿಲಲ್ಲಿ ಹೆಂಗುಸರು ಯಾರೋ ಬಂದಂತಿದೆ. ಬಾರೇ, ಬೇಗ ದೀಪ ತೆಗೆದುಕೊಂಡು !

**ಲಕ್ಷ್ಮಿ**

(ಇದ್ದಲ್ಲಿಂದಲೆ ಅವಸರದಲ್ಲಿ) ಬನ್ನಿರಮ್ಮಾ ಬನ್ನಿ, ಒಳಗೆ ಬನ್ನಿ ! ಇಗೋ ತರತಿದ್ದೇನೆ ದೀಪ. ಬನ್ನಿ ಬನ್ನಿ !

(ಕೈದೀಪದೊಂದಿಗೆ ಈರ್ವರೂ ಬಾಗಿಲಿಗೆ ಬಂದು ದಾಮೂನನ್ನು ಕಂಡು ಪೆಚ್ಚಾಗುವರು. ಲಕ್ಷ್ಮಿ ನಾಚಿ ಒಳಗೆ ಹೋಗುವಳು.)

**ದಾಮೋದರ**

ಏನಯ್ಯಾ ಭಗವಂತಾ, ಮೂವತ್ತು-ಗೀವತ್ತು ವರ್ಷ-ಗಿರ್ಷದ ಪರಿಚಯ-ಗಿರಿಚಯದ ದನಿ-ಗಿನಿ ಸಹ ತಿಳಿ-ಗಿಳಿಯಲಿಲ್ಲವೇನಯ್ಯಾ ನಿನಗೆ ? ಹೋಗಲಿ, ಗಂಡು-ಗಿಂಡೆಂದು ಸಹ ದನಿ-ಗಿನಿಯ ಮೇಲೆ ಗೊತ್ತು-ಗಿತ್ತಾಗಲ್ವೆ? ಬನ್ರೆಮ್ಮಾ-ಗಿನ್ರೆಮ್ಮಾ ಎಂದೇ ಸುರು-ಗಿರು ಮಾಡಿಬಿಟ್ಟಿದೀಯಾ ಒಂದೇ ಸನ್ನೇ !

**ಭಗವಂತ**

(ಅನುಮಾನಿಸಿ) ಇಲ್ಲ....ದಾಮೂ....ಸ್ತ್ರೀ....

**ದಾಮೋದರ**

ಓ, ಸರಿ ಸರಿ. ಸ್ತ್ರೀ-ಗೀಯಿಂದ ಧನ-ಗಿನ ಲಾಭ ತಾನೆ ?

**ಭಗವಂತ**

(ತಪ್ಪಿತನಂತೆ) ಅದಕ್ಕೇ. ಇರಲಿ ಬಿಡು. ಇದೇನಯ್ಯಾ, ಪೂರ್ತಿ ನೆಂದುಕೊಂಡು ಬಂದಂತಿದೆ ದಾರಿಯುದ್ದಕ್ಕೂ. ಮಳೆ ಆಯ್ತೇನೋ, ಇಲ್ಲಿ ತೊಟ್ಟು ಹನಿ ಸಹ ಇಲ್ಲ.

**ದಾಮೋದರ**

ಮಳೆ-ಗಿಳೆ ಅಷ್ಟಿಷ್ಟಲ್ಲ ನೋಡು. ನಿನ್ನ ಸಿಹೀ ಊಟದ ಮಹಿಮೆ-ಗಿಹಿಮೇನೋ ಮಹರಾಯಾ ! ಮುಗಿಲು-ಗಿಗಿಲಲ್ಲಿ ತೂತು-ಗೀತು ಏನಾದರೂ ಬಿದ್ದು-ಗಿದ್ದಿದೆಯೋ ಏನೋ! ( ನಡುಗುತ್ತ ) ಏನು ಚಳಿ-ಗಿಳಿಯಯ್ಯಾ ಇದು? ಏನಾದರೂ ಇಟ್ಟು-ಗಿಟ್ಟಿದೀಯಾ ಅಗ್ನಿ-ಗಿಗ್ನಿಹೋತ್ರ ? ಇದು ? ಸಿಗರೇಟ-ಗಿಗರೇಟು ? ಇಲ್ಲವೇನಯ್ಯಾ ? ನಾಳೆ-ಗೀಳೆ ಬೆಳಗು-ಗಿಳಗಾದರೆ ಲಾಕೋ-ಗೀಕೋಪತಿ ನೀನು ! ಬಿರ್ಲಾ-ಗಿರ್ಲಾಗಳು ಕೈ-ಗಿಯ್ಮುಗಿಯ್ಯಡಕ್ಕೆ ಬರಬೇಕು ನಿನ್ನ ಹತ್ತರ-ಗಿತ್ತರ.

**ಭಗವಂತ**

ಮನೆಯಲ್ಲಿ ಏನೋ ಇಲ್ಲ. ತಾಳು, ಅವಳ ಹತ್ತಿರ ಏನಾದರೂ ಚಿಲ್ಲರೆ ಇದ್ರೆ ತರ್ತೀನೆ. ಪಕ್ಕದ ಅಂಗಡಿಯಲ್ಲಿ ತರೋಣವಂತೆ. ಏನೇ,....ಲೇ.

**ಲಕ್ಷ್ಮಿ**

ಬಂದೆ ಕಣ್ರೀ, ಏನು, ಬಂದರೆ ಅವರು....ಬನ್ನಿರೆಮ್ಮಾ (ಕೈದೀಪದೊಂದಿಗೆ ಬರುವಳು).

**ಭಗವಂತ**

ಯಾರೂ ಬಂದಿಲ್ಲವೇ ಏಳು ತಿಂಗಳಲ್ಲಿ ಹುಟ್ಟಿದವಳೆ ! ಹಾಗೇಕೆ ಅವಸರಪಡುತ್ತಿ ? ಅದಿರಲಿ, ಏನಾದರೂ ಚಿಲ್ಲರೆ ಇದೆಯೋ ?

**ಲಕ್ಷ್ಮಿ**

ಅಯ್ಯೊ, ನಿಮಗಿಲ್ಲ ಅಂತೇನೆಯೋ ? ತೆಕ್ಕೊಳ್ಳಿ ಆ ಗೂಡಿನಲ್ಲಿದೆ.... ಸಿಕ್ಕಿತೇ ?....ಆ ಮೊಸರಿನವಳು ಕಡ್ಡಾಯ ಮಾಡಿದಳಲ್ಲ, ನೀವು ಮಾರ್ಕೆಟಿಗ ಹೋದಾಗ ! ಪಕ್ಕದ ಮನೆಯ ಪದ್ಮಾವತಮ್ಮನ ಹತ್ತಿರ ಒಂದು ರೂಪಾಯಿ ತಂದು ಎಸೆದೆ ಅವಳ ಮುಖಕ್ಕೆ. ತನ್ನ ಹದಿಮೂರುವರೆ ಆಣೆ ತೆಗೆದುಕೊಂಡು, ಮಿಕ್ಕ ಎರಡೂವರೆ ಆಣೆ ಅವಳೇ ಅಲ್ಲಿ ಇಟ್ಟು ಹೋಗಿದ್ದಾಳೆ, ನನ್ನ ಕೈಯಲ್ಲಿ ಕೆಲಸವಿದ್ದಿತೂ ಅಂತ....ಸಿಕ್ಕಿತೇನ್ರೀ ?

**ಭಗವಂತ**

ಹಾ ಸಿಕ್ಕಿತು. ಎಷ್ಟಿದೆ ಅಂದಿ ?

**ಲಕ್ಷ್ಮಿ**

ಎರಡೂವರೆ ಆಣೆ ಇಲ್ವೆ ? ಒಂದು ಅರ್ಧಾಣೆ, ಒಂದು ಎರಡಾಣೆ ಅಂದ್ಲಲ್ಲ ಅವಳೂ !

**ಭಗವಂತ**

ಅಯ್ಯೊ, ಒಳ್ಳೇ ಪೆಚ್ಚು ಅವಳು. ಎರಡಾಣೆ ಅಲ್ವೇ ಇದು, ನಾಲ್ಕಾಣೆ ಕಣೇ.

**ದಾಮೋದರ**

ಯಾರು, ಮೊಸರ-ಗಿಸರಿನವಳೇ ?

**ಲಕ್ಷ್ಮಿ**

ಹೌದು.

ದಾಮೋದರ

ಎರಡು–ಗಿರಡಾಣೆ ಹೆಚ್ಚು-ಗಿಚ್ಚು ಇಟ್ಟಿ-ಗಿಟ್ಟಿದಾಳೆಯೋ ?

ಭಗವಂತ

ಹೌದು.

ದಾಮೋದರ

ನಿಜ-ಗಿಜ ಆಯುಷ್ಯಲ್ಲವೋ ಭಗವಂತಾ, ನಿನ್ನ ವಾರ-ಗೀರ ಭವಿಷ್ಯ !

ಭಗವಂತ

ಹೇಗೋ ?

ದಾಮೋದರ

ಸ್ತ್ರೀ–ಗೀಯಿಂದ ಧನ-ಗಿನ ಲಾಭ !

ಭಗವಂತ— ಲಕ್ಷ್ಮಿ

( ದಿಗ್ಭ್ರಮೆಯಾಗಿ ) ಅಯ್ಯೋ ! ಇದೆಯೋ ಧನಲಾಭ !

---

# ಕೆ. ಪಿ. ಸಿ. ಸಿ. ಮಾನ ಸಂರಕ್ಷಣಾ

## ಪಾತ್ರಗಳು

| | | |
|---|---|---|
| ೧. | ತಿಂಮ | ನಾಟಕದ ಸೂತ್ರಧಾರ |
| ೨. | ಸುಬ್ಬಿ | ತಿಂಮನ ಸೂತ್ರಧಾರಳು |
| ೩. | ಕನ್ನಡಮಾತೆ | ಕನ್ನಡಮಾತಿನಲ್ಲಿ ಹಾಡು-ತೋಡುವ ಆರ್ತ ದೇವತೆ |
| ೪. | ಭಾರತಿ | ಕುಳಿತ ದೇವತೆ |
| ೫. | ಅಧ್ಯಕ್ಷ | ಮಾತು ಬಂದರೂ ದಣಿದವರಂತೆ ಕೂತಿರುವ ಧುರೀಣರು |
| ೬. | ಉಪಾಧ್ಯಕ್ಷ | |
| ೭. | ಕಾರ್ಯದರ್ಶಿ | |
| ೮. | ಸದಸ್ಯರು | |
| ೯. | ಒಬ್ಬ | ಮತ್ತೊಬ್ಬನಂತಿರುವ ಒಬ್ಬ |
| ೧೦. | ಇನ್ನೊಬ್ಬ | ಒಬ್ಬನಂತೆ ಇದ್ದರೂ ಬೇರೊಬ್ಬ |
| ೧೧. | ಮತ್ತೊಬ್ಬ | ಇಬ್ಬರಷ್ಟಿರುವ ಒಬ್ಬನೇ ಒಬ್ಬ |
| ೧೨. | ಸುದ್ದಿಗಾರ | ಶುದ್ಧಿಯ ಮೇಲಿರುವ ಮಾನವ |
| | ಜನತೆ-ಜನರು | 'ಜೈ'ಕಾರದ ಜಂಗುಳಿ |

(ತೆರೆ ಏಳುವದು. ಸೂತ್ರ ಮತ್ತು ನಟಿಯರ ವೇಷದಲ್ಲಿದ್ದ ತಿಂಮ ಮತ್ತು ಅವನ ಗೆಳತಿಯಾದ ಸುಬ್ಬಿಯರ ಪ್ರವೇಶ)

### ತಿಂಮ

ಹಾ, ಸುಬ್ಬಿ! ಇದುವೆ ಅಲ್ಲವೆ ಸುಸಂಧಿ? ಇದೇ ಶ್ರೇಷ್ಠಸಮಯ. ಮನರಂಜನೆಗಾಗಿ ಇಲ್ಲಿ ಸೇರಿರುವ ಎರಡು ಕೋಟಿ ರಸಿಕ ಕುರಿಗಳ ವಧೆಗಾಗಿ ಅಲ್ಲ- ಸಭೆಗಾಗಿ ಅದಾವ ನಾಟಕವನ್ನು ಆಡೋಣ ಬೇಗ ಹೇಳು. ತಡಮಾಡ ಬೇಡ, ಮೂರನೆ ಬೆಲ್ಲು ಸಹ ಹೊಡೆದಾಯಿತು. ಯಾವ ನಾಟಕವನ್ನಾಡೋಣ?

### ಸುಬ್ಬಿ

ಇಷ್ಟೇಕೆ ದಿಗಿಲು ಬಿದ್ದಿರುವಿ ಪ್ರಿಯ ತಿಂಮಾ! ನೀನೇ ಹೇಳಿದೆಯಲ್ಲವೆ ಕನ್ನಡ ಕುರಿಗಳೆಂದು. ಯಾರು ನಿಂತರೂ ಓಟು ಕೊಡುವಂತೆ, ಯಾವ ನಾಟಕವನ್ನಾಡಿದರೂ ನೋಡಿ ಹೋಗುವ ಶೂರ ಸಂಪನ್ನರಲ್ಲವೆ ಅವರು.

### ತಿಂಮ

ಇದೇನು ಸುಬ್ಬಿ, ಈ ರೀತಿಯಾಗಿ ನುಡಿಯುವಿ; ಹಣ ಕೊಟ್ಟು ನೋಡಲು ಬಂದವರು ಯಾವ ನಾಟಕವನ್ನಾಡಿದರೂ ನೋಡಿ ಹೇಗೆ ಸುಮ್ಮನಿದ್ದಾರು? ನಮ್ಮನ್ನು ಹಿಡಿದು ನಿಲ್ಲಿಸಿ ಕೇಳಲು ಅವರಿಗೆ ಹಕ್ಕಿಲ್ಲವೇ?

### ಸುಬ್ಬಿ

ಪ್ರಿಯತಮಾ, ನೀನೆಂಥ ಮೂರ್ಖ! ನೀನೂ ಅವರಂತೆಯೇ ಮಾತನ್ನಾಡುತ್ತಿರುವಿಯಲ್ಲ? ಹಕ್ಕು? ಇದೆಯೆಂದು ಅವರಿಗೆ ತಿಳಿಯಲು ಬುದ್ಧಿ ಬೇಕು, ಅದನ್ನು ಸಾಧಿಸಿಕೊಳ್ಳಲು ಅವರಿಗೆ ಯೋಗ್ಯತೆ ಬೇಕು. ಅವರಿಗೆ ತಿಳಿಯದ ಹಕ್ಕುಗಳು ಎಷ್ಟಿದ್ದರೇನು? ಆಡಿದ ನಾಟಕವನ್ನು ನೋಡಿ ಕೈ ತಟ್ಟಿ ಮನೆಗೆ ಹೊರಡುವದು ಅವರ ಕರ್ತವ್ಯವಲ್ಲವೇ?

### ತಿಂಮ

ಎಂದಾದರೂ ಅವರು ಹೀಗೆ ಮಾಡಿದುದುಂಟೇ ಸುಬ್ಬಿ?

### ಸುಬ್ಬಿ

ನಿನಗೆ ಮಂಕು ಹಿಡಿದಿರಬೇಕು ತಿಂಮಾ. ಎಂದಾದರೂ ಏಕೆ? ಈಗ, ಇಂದು, ಈ ಗಳಿಗೆಯಲ್ಲಿ ನಮ್ಮ ಮುಖಂಡರು ಆಡುತ್ತಿರುವ ನಾಟಕವನ್ನು

ನೋಡುತ್ತ ಕುಳಿತು ಚಪ್ಪಾಳೆ ತಟ್ಟುತ್ತಿಲ್ಲವೇ ನಮ್ಮ ಕನ್ನಡ ಮರಿಗಳು ? ನಾಲ್ಕಾಣೆಯವರಿಂದ ಹಿಡಿದು ಕಾಂಪ್ಲಿಮೆಂಟರಿ ಪ್ರೇಕ್ಷಕ ಬೃಂದದ ವರೆಗೂ ಏನಾದರೂ ತಕರಾರು ಬಂದಿದೆಯೇ ?

**ತಿಂಮ**

ಇಲ್ಲ, ಇಲ್ಲ. ನಿಜವಾಗಿಯೂ ಇಲ್ಲ. ಪ್ರೇಕ್ಷಕರಿದ್ದರೆ ಇಂತಹರಿರ ಬೇಕು. **(ತಿಮ್ಮ ಸುಬ್ಬಿ ಇಬ್ಬರೂ ಸೇರಿ ಹಾಡುವರು)**

ಪ್ರೇಕ್ಷಕರಿದ್ದರೆ ಇಂತಹರಿರಬೇಕೇ
ನಾವಾಡಿದ್ದೋಡಿಕೊಂಡು ಬಿದ್ದಿರಬೇಕೇ
ಪ್ರೇಕ್ಷಕರಿದ್ದರೆ ಇಂತಹರಿರಬೇಕೇ
ನಾವ್ಹೇಳಿದ್ದೇಳಿಕೊಂಡು ಕುಳಿತಿರಬೇಕೇ
ಪ್ರೇಕ್ಷಕರಿದ್ದರೆ ಇಂತಹರಿರಬೇಕೇ

**ತಿಂಮ**

ಪ್ರಿಯೇ, ನಾಲ್ಕಾಣೆಯ ಪ್ರೇಕ್ಷಕ ಬೃಂದದಲ್ಲಿ ಹೆಚ್ಚು ಗಲಾಟೆಯಾಗು ತ್ತಿರುವದು. ಜಾಗೃತೆ ಹೇಳು, ಯಾವ ನಾಟಕವನ್ನು ಆಡೋಣ.

**ಸುಬ್ಬಿ**

ಅವರಕಿಂತಲೂ ನೀನೇ ಹೆಚ್ಚು ಅವಸರದಲ್ಲಿದ್ದಂತೆ ಭಾಸವಾಗುತ್ತದೆ. ಆಗಲಿ "ಕೆ ಪಿ ಸಿ ಸಿ ಮಾನ ಸಂರಕ್ಷಣೆ" ಎಂಬ ನಾಟಕವನ್ನಾಡೋಣ. **(ಇದ್ದಕ್ಕಿದ್ದಂತೆ ಇಬ್ಬರೂ ಅದೃಶ್ಯರಾಗುವರು)**

**೧**

**(ಸ್ವತಂತ್ರ ಭಾರತದ ಸಿಂಹಾಸನದಲ್ಲಿ ಭಾರತಿಯು ರಾರಾಜಿಸುತ್ತಿದ್ದಾಳೆ. ಅವಳ ಎಡಗಾಲಡಿಯಲ್ಲಿ ನಿಂತು ಕನ್ನಡಮಾತೆಯು ತನ್ನೆರಡೂ ಕೈಗಳನ್ನು ಮುಗಿಲಿಗೆತ್ತಿ ಗೋಳನ್ನು ಹೇಳಿಕೊಳ್ಳುತ್ತಲಿದ್ದಾಳೆ. ಅವಳ ಸುತ್ತಲೂ ವಿಕಾರಾಕಾರದ ಲಕ್ಷಾವಧಿ ಕನ್ನಡ ಕ್ರಿಮಿಗಳು ಜುಯ್ಗುಟ್ಟುತ್ತಿವೆ.)**

**(ಮೂವತ್ತು ಮೂರು ಕೋಟಿ ಎಂಬಂತೆ)**

ಮಕ್ಕಳಿವರೇನಮ್ಮ? ಮೂರ್ಖರಿವರೇನಮ್ಮ
ನೂರ್ಲಕ್ಷ ನೂರು ಲಕ್ಷ ? ॥ ಪಲ್ಲ ॥
ನೂರ್ಲಕ್ಷ ನೂರು ಲಕ್ಷಾ, ನೂರ್ಲಕ್ಷ ನೂರು ಲಕ್ಷಾ !
ಮಕ್ಕಳಿವರೇನಮ್ಮ? ಮಂಕುಗಳಿವರೇನಮ್ಮ ?
ನೂರ್ಲಕ್ಷ ನೂರು ಲಕ್ಷ !

ನನ್ನೆಲ್ಲ
ನೂರ್ಲಕ್ಷ ನೂರು ಲಕ್ಷ || ಅನುಪಲ್ಲ ||

೧

ಹಲಕೆಲವು ಎಂಮೆಲೆನ್ನಿ ! ಕೆಲಹಲವು ಮಂತ್ರಿ ಕುನ್ನಿ !
ಕೆಲಕೆಲವು ಕೇಪಿಸಿಸಿ, ಕೆಲವು ಕಾಂಗ್ರೆಸ ಕಸ
ನನಪಾಲಿಗೆಲ್ಲ ಸೊನ್ನಿ !
ಜಂಭಕ್ಕೆ
ನೂರ್ಲಕ್ಷ ನೂರು ಲಕ್ಷ !

೨

ಇತ್ತೊಂದು ಅತ್ತ ಲಕ್ಷ, ಅತ್ತೊಂದು ಸತ್ತ ಲಕ್ಷ !
ಉಣಲಿದ್ದ ಬಾಯಿಯೂ ಉಸಿರುವದಕೇ ಇಲ್ಲ !
ಅತ್ತಿತ್ತ ಕತ್ತೆ ಲಕ್ಷ !
ಅನ್ನಕ್ಕೆ
ನೂರ್ಲಕ್ಷ ನೂರು ಲಕ್ಷ

೩

ಹಾಳರ್ಧ ಶೈವರೆಂದೂ, ಜೀಳರ್ಧ ಬ್ರಾಹ್ಮಣೆಂದೂ
ಉಳಿದ್ದಲವು ಒಕ್ಕಲಿಗ ಮೇಲ್ಕೆಳಗೆ ಆಗಿಹವು
ಮೈಸೂರ ಮಾರಲಿಹವು !
ಕಾಲ್ನೆಕ್ಕಿ
ನೂರ್ಲಕ್ಷ ನೂರು ಲಕ್ಷ

೪

ದೇಸಾಯಿ ಕಾಂಗ್ರೆಸೆಂದೂ, ಗೋಸಾಯಿ ಕಾಂಗ್ರೆಸೆಂದೂ
ಹಸನಾಗಿ ಮೇಲ್ಬಂದು ಹೊಸರೋಗ ತಂದವರು !
ಹೈದರಾಬಾದಿಗಿವರೂ
ಭೂಪರೂ
ನೂರ್ಲಕ್ಷ ನೂರು ಲಕ್ಷ !

೫

ರಜಕರರು ಹೋದರೆಂದೇ, ಮಜಕರರು ಬಂದರ್ರಿಂದೇ
ರಾಜರನು ನುಂಗಿದರು ನಿಜಾಮರು ಉಳಿದರೂ !
ರಾಜಾಜಿ ಕೊಟ್ಟ ಅಭಯ
ಇದು ಏಕೆ ?
ಸೂರ್ಲಕ್ಷ ನೂರು ಲಕ್ಷ !

೬

ಉತ್ತರದ ದೇಭರಿವರೂ, ಎತ್ತರದ ಮಾತಿನವರೂ
ಉತ್ತರಸ ಅಬ್ಬರದಿ ಮೆತ್ತಗೆ ಜಾರುವರು
ಯಾರೆತ್ತ ಸತ್ತರೇನು ?
ಜೋಳಿಗೆಯು
ಸೂರ್ಲಕ್ಷ ನೂರು ಲಕ್ಷ

೭

ದಿಲ್ಲಿಯಲಿ ಕುಳಿತರೇನೂ ? ಕಲ್ಲಿನೆದೆಯವರು ಏನೋ ?
ಅಧಿಕಾರ ಮದದಲ್ಲಿ, ಮಂತ್ರಿಪದವಿಗಳಲ್ಲಿ
ಗೋರಿಯನೆ ಕಟ್ಟಬೇಡಿ !
ನನಗೊಂದು
ಸೂರ್ಲಕ್ಷ ನೂರು ಲಕ್ಷ

೮

ಆಂಧ್ರರನು ನೋಡಿ ಬನ್ನೀ, ಕಿಂದ್ರರಿಗೆ ಅಂಜಿವೆನ್ನೀ
ಅಂದಿನ ಪರಾಕ್ರಮ ಹಿಂದಿನ ಶೂರತನ
ಹೋದವು ಈಗ ಎಲ್ಲಿ ?
ಮುಂದೇನು
ಸೂರ್ಲಕ್ಷ ನೂರು ಲಕ್ಷ

೯

ಗಾದಿಗಳ ಬಿಟ್ಟು ಬನ್ನೀ ಟೊಪ್ಪಿಗೆಯ ಕೊಟ್ಟು ಬನ್ನೀ
ಅಧಿಕಾರವೆಂಜಲಿಗೆ ಅನ್ಯಾಯ ಮಾಡಿವಿರಿ
ಎಲ್ಲರೂ ಓಡಿ ಬನ್ನಿ
ನಿಲ್ಲದಲೆ
ನೂರ್ಲಕ್ಷ ನೂರು ಲಕ್ಷ

(ಕನ್ನಡತಾಯಿಯು ನಿಶ್ಚೇಷ್ಟಳಾಗಿ ನೆಲಕ್ಕೆ ಬೀಳುವಳು)

(ಜುಮ್ಮುಗುಡುತ್ತಿದ್ದ ವಿಕಾರಾಕಾರದ ಹಲವು ಕ್ರಿಮಿಗಳು ಒಂದೊಂದಾಗಿ ಮನುಷ್ಯರೂಪವನ್ನು ತಾಳಿ ಗುಂಪು ಸೇರುವವು. ನಿಶ್ಚೇಷ್ಟಳಾಗಿ ನೆಲಕ್ಕೆ ಬಿದ್ದಿರುವ ತಾಯಿಯನ್ನು ಕಂಡು ಎಲ್ಲರೂ ಏಕ ಕಂಠದಿಂದ ಘೋಷಿಸುವರು.)

“ಬೋಲೋ ಪ್ರಾಂತಹೀನ ಕನ್ನಡ ಮಾತಾಕೀ ಜೈ! ಬೋಲೋ, ಪ್ರಾಂತ ಕಟ್ಟುವ ಕೆ. ಪಿ. ಸಿ. ಸಿ. ಕೂ ಜೈ!”

(ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯದರ್ಶಿ ಮತ್ತು ವಿಶೇಷ ಸದಸ್ಯರು ಲೋಡಿಗಾತು ಕೂಡುವರು. ಸಿಡಿಲು ಮಿಂಚಿನಂತಹ ಭಾಷಣಗಳು ಬೀಳುವವು.)

ಒಬ್ಬ

ಢಂ, ಢುಂ, ಢಡಂ. ನಮ್ಮ ತಲೆಗೆ ಯಾರ ಕತ್ತಿಯೂ ಅಲ್ಲ-ನಮ್ಮ ಕತ್ತಿಗೆ ಯಾರ ತಲೆಯೂ ಅಡ್ಡಬಾರದಿರಲಿ. ನಮ್ಮ ತಾಯಿಗಿಂದು ನೋವಾಗಿದೆ. ಚರಿತ್ರಾರ್ಹರಾದ ಭೂಗೋಲಾರ್ಹರಾದ ಮಕ್ಕಳಿದ್ದ ನಮ್ಮ ತಾಯಿಗೆ ಈ ಅವಮಾನವೇ ? ಢಂ, ಢುಂ, ಢಡಂ. ಇಂದೇ, ಈಗಲೇ, ಈ ಕ್ಷಣವೇ ಪ್ರಾಂತವನ್ನು ಕಟ್ಟುತ್ತೇವೆ. ಕಟ್ಟಿಯೇ ತೀರುತ್ತೇವೆ. ಕಟ್ಟಿಯೇ ಬಿಡುತ್ತೇವೆ. ಅಂಗ, ವಂಗ, ಕಳಿಂಗ, ಕಾಶ್ಮೀರ, ಗುಜರಾಥ, ಅಮೇರಿಕೆಯಲ್ಲಿಯ ಕೆನಡಾ ಮತ್ತು ತಾಯ್ಲೆಂಡಗಳು ಅಂದಮ್ಮ ಕನ್ನಡ ರಾಜ್ಯಗಳಾಗಿರಲಿಲ್ಲವೇ ? ನಮ್ಮ ಆಳರಸರ ಕುದುರೆಗಳು ಗಂಗಾ, ಸಿಂಧು, ನರ್ಮದಾ, ತಪತೀ, ಗೋದಾವರಿ, ನೈಲ್, ಯಾಂಗತ್ಸಿಯಾಂಗ್ ಮತ್ತು ಮಿಸಿಸಿಪಿ ನದಿಗಳಲ್ಲಿ ನೀರು ಕುಡಿದಿಲ್ಲವೇ ? ವಿಂಧ್ಯಾ, ಹಿಮಾಲಯ, ಆಲ್ಪ್ಸ ಪರ್ವತಗಳನ್ನು ನಮ್ಮ ಕನ್ನಡ ಅಶ್ವಗಳು ಜಿಗಿದು ಹಾರಿಲ್ಲವೇ ?

ಇನ್ನೊಬ್ಬ

ಅಹುದು ಹಾರಿವೆ. ಹಾರಿವೆ; ಆ ಶಕ್ತಿಯು ನಮ್ಮಲ್ಲಿ ಇಂದು ಸಹ ಕುಗ್ಗಿಲ್ಲ. ಇಂದೇ ಈಗಲೇ, ಈ ಕ್ಷಣವೇ ನಾವೂ ಹಾರಬಲ್ಲೆವು—ನಾಲ್ಕೇ

ತಾಸುಗಳಲ್ಲಿ ವಿಮಾನದಲ್ಲಿ—ದಿಲ್ಲಿಗೆ—ಹಾರಬಲ್ಲೆ ವು.ಸಂಜೀವನವನ್ನು ತರಲು ಹನುಮನು ಹಾರಿದಂತೆ ನಾವೂ ಹಾರಬೇಕು. ಸಾಕ್ಷಾತ್ ಮುಕ್ಕಣ್ಣನು ಅಡ್ಡ ಬಂದರೂ ಉದ್ದ ಹೋದರೂ ನಾವು ಮಾತ್ರ ಕರ್ತವ್ಯಮೂಢರಾಗಲಾರೆವು. ಆದರೆ ಪಟೇಲರದೊಂದೇ ನಮಗೆ ಭಯ.

**ಮತ್ತೊಬ್ಬ**

ದಯವಿಟ್ಟು ಹೆಸರುಗಳನ್ನು ಮಾತ್ರ ಎತ್ತಬೇಡಿ. ನಮಗೆ ಹಲವು ತೊಡರುಗಳಿವೆ. ಸದ್ಯಕ್ಕೆ ಮೈಸೂರೊಂದು ನಮಗೆ ಅಡ್ಡ ನಿಂತಿದೆ.

**ಒಬ್ಬ**

ಢಂ, ಢುಂ, ಢಡಂ. ಕಣ್ಣು ಮುಚ್ಚಿ ತೆರೆಯುವದರೊಳಗಾಗಿ ಮೈಸೂರನ್ನು ಉರುಳಿಸುತ್ತೇನೆ. ಇದಾವ ದೊಡ್ಡ ಕೆಲಸ ? ಉರುಳಿಸುವ ಅನುಭವ ಇಲ್ಲಿ ಯಾರಿಗೂ ಇಲ್ಲವೇನು ? ವೀರರೇ ! ನಲವತ್ತೆರಡನ್ನು ನೆನಪು ಮಾಡಿಕೊಳ್ಳಿರಿ. ರೈಲುಗಳನ್ನು ಉರುಳಿಸಿದವರು ಇಲ್ಲಿ ಇದ್ದಾರೆ. ಶಾಲೆಗಳನ್ನು ಸೇತುವೆಗಳನ್ನು, ತಂತಿ ಮತ್ತು ದೀಪದ ಕಂಬಗಳನ್ನು ಉರುಳಿಸಿದವರೂ ಇದ್ದಾರೆ. ಕೂಡಿಟ್ಟ ಫಂಡುಗಳನ್ನು ಉರುಳಿಸಿದವರೂ....

**ಇನ್ನೊಬ್ಬ**

(ಅರ್ಧದಲ್ಲಿಯೇ ಬಾಯಿ ಹಾಕಿ) ಏ ಏ ಏ !

**ಒಬ್ಬ**

ಕ್ಷಮಿಸಿ, ಬಾಯಿ ಜಾರಿತು. ಏಳಿರಿ ಕನ್ನಡ ವೀರರೇ ಏಳಿರಿ.ಮಲಗಿದರೆ ಮಲಗಿಯೇ ಬಿಡುತ್ತೇವೆ. ಎದ್ದರೆ ಎದ್ದೇ ಬಿಡುತ್ತೇವೆ.

**ಮತ್ತೊಬ್ಬ**

(ಮಲಗಿದಲ್ಲಿಂದಲೇ) ಅಹುದು ಏಳುತ್ತೇವೆ. ಎದ್ದಮೇಲೆ ಏನು ಮಾಡಬೇಕು ?

**ಇನ್ನೊಬ್ಬ**

ಒಂದು ಗೊತ್ತುವಳಿಯನ್ನು ಮಾಡಬೇಕು.ಅದರಿಂದ ಇಡೀ ಭೂಲೋಕ ಅಮರಲೋಕ ಪಾತಾಳ ಲೋಕಗಳಲ್ಲಿ ಜ್ವಾಲಾಮುಖಿ ಎದ್ದಂತಾಗಿರಬೇಕು. ಅದರ ಒಟ್ಟರ್ಥ ಇಷ್ಟಿರಬೇಕು. ಎಂದಾದರೂ ನಮಗೊಂದು ಪ್ರಾಂತವನ್ನು (ಮೈಸೂರು ಹೈದರಾಬಾದು, ಬೆಳಗಾವಿ, ಬಳ್ಳಾರಿ ಸಹಿತ ಅಥವಾ ರಹಿತ)

ಕೊಡುತ್ತೇವೆಂದು ವಾಗ್ದಾನ ಮಾಡುತ್ತೇವೆಂದು, ಮಾತು ಕೊಡುವವರ ಬಗ್ಗೆ ಆಶ್ವಾಸನದ ವಾಸನೆಯನ್ನು ತೋರಿಸುತ್ತೇವೆಂದು ಹೇಳುವ ಸೂಚನೆಯನ್ನು ಕೇಂದ್ರವು ಕೊಡಲಿ. ಇಲ್ಲವಾದರೆ ಭಯಂಕರವಾದ ಕ್ರಾಂತಿಕಾರವಾದ ನಮ್ಮ ನಿಶ್ಚಯವನ್ನು ಕೇಳಿರಿ. ನಾವು ಕೊಡುವ ಕರೆಗೆ ಒಪ್ಪಿ ರಾಜೀನಾಮೆ ಕೊಡಲು ಸಮ್ಮತಿಸುವ ಹಲವು ಎಮ್ಮೆಲೆಗಳು (ಮಂತ್ರಿಗಳ ಮಾತು ಈಗೇಕೆ) ಒಂದು ಪಕ್ಷ ಆಕಸ್ಮಾತ್ತಾಗಿ ತಿಳಿದೋ ತಿಳಿಯದೆಯೋ ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ಕೊಡಲು ಸಿದ್ಧವಾದಾಗ ಆ ಅವರು ಅವರವರ ಮನೆಯವರ ಪರವಾನಿಗೆ ಕೇಳಲು ಅವರಿಗೆ ನೀವು ಅನುಮತಿ ಕೊಡಬೇಕು. ಎಂದು ಈ ಸಭೆಯು ಆದರದಿಂದ ಅವಸರದಿಂದ ಕೇಳಿಕೊಳ್ಳುತ್ತದೆ.

### ಒಬ್ಬ

ಈ ಗೊತ್ತುವಳಿಗೆ ನನ್ನದೊಂದು ಮಾತನ್ನು ಸೇರಿಸಲೇಬೇಕೆಂದು ನನ್ನ ವಿಜ್ಞಾಪನೆ ಇದೆ. ಕಡೆಯ ವಾಕ್ಯದಲ್ಲಿರುವ ' ಆದರದಿಂದ ಅವಸರದಿಂದ' ಆದ ಮೇಲೆ ' ಬೇಸರದಿಂದ ' ಎಂಬ ಮೆಣಸಿನಂತಹ, ಮಾತನ್ನು ಸೇರಿಸಬೇಕು.

### ಮತ್ತೊಬ್ಬ

ಇದು ಬೇಡ. ಕೊಂಚ ನನ್ನಮಾತನ್ನು ಕೇಳಿ. ಅವರ ಬಲ ನಮ್ಮ ಅಬಲ, ಅವರ ಯೋಗ್ಯತೆ ನಮ್ಮ ಅಯೋಗ್ಯತೆ.

### ಒಬ್ಬ

ಇಲ್ಲ ಇಲ್ಲ. ಈ ಮಾತು ಗೊತ್ತುವಳಿಯಲ್ಲಿ ಬರಲೇಬೇಕು.

### ಎಲ್ಲರೂ

ಅಹುದು, ಅಹುದು, ' ಬೇಸರದಿಂದ ' ಎಂಬುದಿರಲೇಬೇಕು. ಪಾಸಾಯಿತು. ಗೊತ್ತುವಳಿಯು ಪಾಸಾಯಿತು. ( ಗೊಂದಲವೇ ಗೊಂದಲ, ಸಭೆಯು ಮುಕ್ತಾಯವಾಯಿತು. )

## ೨

( ಸರದಾರರ ಅರಮನೆಯ ಹೊರಬಾಗಿಲ ಬದಿ ಒಬ್ಬ ಇನ್ನೊಬ್ಬ ಮತ್ತೊಬ್ಬ ಮುಂತಾದವರು ಒಬ್ಬರನ್ನೊಬ್ಬರು ಒಳದೂಡುತ್ತಿದ್ದಾರೆ. ಬೆಕ್ಕಿಗೆ ಯಾರು ಗಂಟೆಯನ್ನು ಕಟ್ಟಬೇಕು ಎಂದು ಇಲಿಗಳು ಸಭೆಮಾಡಿಕೊಂಡಂತೆ ಯಾರು ಮೊದಲ ಆಹುತಿಯಾಗಬೇಕೆಂಬುದು ಚರ್ಚೆಗೆ ಬಂದಿದೆ. ಸುತ್ತಲೂ ವಾರ್ತಾ ಪತ್ರಿಕೆಯ ಸುದ್ದಿಗಾರರು ತುಂಟ ಮಕ್ಕಳಂತೆ ಹಾರಾಡುತ್ತಿದ್ದಾರೆ. )

**ಮತ್ತೊಬ್ಬ**

( ರಮಿಸುವ ದನಿಯಲ್ಲಿ ) ಅದೇಕಯ್ಯಾ ಅಂಜುತೀರಾ ? ಭಯ ಬೇಡ ಕಣ್ರೀ, ದಮ್ಮಯ್ಯಾ ! ಅವರೇನು ತಿನ್ನುತ್ತಾರೆಯೇ ನಿಮ್ಮನ್ನು ? ಹೊರಡಿ ಮುಂದೆ. ಅಂಜುವದು ಬೇಡ.

**ಒಬ್ಬ**

ಥಂ, ಘುಂ, ಥಂ. ಯಾರಿಗಿರೀ ಅಂಜಿಕೆ ? ಅಂಜಲಿಕ್ಕೆ ನಾವೇನು ಹೆಂಗಸರೇ, ಸ್ತ್ರೀಯರೇ, ಅಥವಾ ನಾರಿಯರೇ—ಅಲ್ಲಾ ಕ್ಷಮಿಸಿ- ಅಧ್ಯಕ್ಷರೇ— ಇಲ್ಲಾ ಮಂತ್ರಿಗಳೇ ? ಥಂ, ಘುಂ, ಧಡಂ, ಬರೀ ಮುಂದೆ ಹೋಗುವದೇಕೆ, ನಾನೊಬ್ಬನೇ ಹೋಗಲು ಸಿದ್ಧನಿದ್ದೇನೆ, ಆದರೆ ಇಷ್ಟೇ. ಮುಂದೆ ನೀವಿರ ಬೇಕು. ಏಕೆಂದರೆ....

**ಇನ್ನೊಬ್ಬ**

ಒಬ್ಬರು ಮುಂದೆ ಒಬ್ಬರು ಹಿಂದೆ ಎಂಬ ಮಾತೇಕೆ ಈಗ ? ಹೀಗಾ ಗಿಯೇ ಇಡೀ ಕರ್ನಾಟಕವೇ ಇಂದು ಹಿಂದಾಗಿದೆ. ಅದೆಲ್ಲವೂ ಬೇಡ. ಎಲ್ಲರೂ ಸಾಲಾಗಿ ನಿಲ್ಲೋಣ ಬನ್ನಿ, ನಾನು ಕಡೆಗೆ ನಿಲ್ಲುತ್ತೇನೆ.

**ಸುದ್ದಿಗಾರ**

( ಸನಿಯ ಬಂದು )ಒಂದಾ ವೇಳೆ ಪ್ರಾಂತದ ಆಶ್ವಾಸನ ಬಾರದಿದ್ದರೆ ಏನು ಮಾಡುತ್ತೀರಿ ?

**ಒಬ್ಬ**

( ಹಲ್ಲು ಮಸೆಯುತ್ತ ) ಏನು ಮಾಡುತ್ತೀವಿ ?....

**ಮತ್ತೊಬ್ಬ**

( ಅವಸರದಿಂದ ಮುಂದೆ ಬಂದು ) ಕೊಂಚ ತಡೆಯಿರಿ, ನಾನು ಹೇಳು ತ್ತೇನೆ. ಆಶ್ವಾಸ ಬರುತ್ತದೆ,ಬಂದೇ ಬರುತ್ತದೆ,ಬರಲೇಬೇಕು, ಆಶ್ವಾಸ ಬರುವ ವಿಶ್ವಾಸ ನಮಗಿದೆ.

**ಇನ್ನೊಬ್ಬ**

ಬಂದರೆ ಸರಿ. ಬಾರದಿದ್ದರೆ ಏನು ಮಾಡುತ್ತೀರಿ ಎಂಬುದು ಅವರ ಪ್ರಶ್ನೆ.

**ಒಬ್ಬ**

( **ಇಲ್ಲದ ಮೀಸೆ ತಿರಿವಿ, ಬಲಭೀಮನಂತೆ** ) ಬಾರದಿದ್ದರೇ....

### ಮತ್ತೊಬ್ಬ

(ಉಳಿದಿಬ್ಬರನ್ನೂ ಹಿಂದೂಡಿ) ನೀವು ಕೊಂಚ ತಡೆಯಿರಿ. ಅವಸರದಲ್ಲಿ ಏನಾದರೊಂದನ್ನು ಹೇಳಿಡಬೇಡಿ ಸ್ವಾಮಿ, ಆ ಮೇಲೆ ಪತ್ರಿಕೆಯವರೆಂದರೆ ಮಹಾ........

### ಸುದ್ದಿಗಾರ

ಏನು ಹೇಳುತ್ತಿದ್ದಿರಿ, ಮಹಾಸ್ವಾಮಿಗಳೇ ? (ನಗುವನು)

### ಮತ್ತೊಬ್ಬ

ಹೋಗಲಿ ಬಿಡಿ. ನಿಮಗಲ್ಲ ಅದು, ಇನ್ನೊಬ್ಬರ ಮಾತು. ಆಯಿತು ನೋಡಿ. ಈಗೇನಾದರೂ ಸರದಾರರು ನಮ್ಮ ಬೇಡಿಕೆಯನ್ನು ಮಾನ್ಯಮಾಡಿ ತಕ್ಷಣವೇ, ಕೂಡಲೆ, ಈಗಿಂದೀಗಲೇ. ನಿಂತಪಟ್ಟಿನಮೇಲೆಯೇ ನಮಗೆ ಪ್ರಾಂತವನ್ನು ಕೊಡಲೇಬೇಕು.

### ಸುದ್ದಿಗಾರ

(ಅಣಕಿನ ದನಿಯಲ್ಲಿ) ಕೊಡಲೇಬೇಕು. ಆದರೆ ಕೊಡದಿದ್ದರೆ ? ಆಗ ತಾವೇನು ಮಾಡುವಿರಿ ಎಂಬುದನ್ನಿಷ್ಟು ಸೂಚಿಸಿದರೆ ನಾನು ಧನ್ಯನಾಗುತ್ತೇನೆ ಮಹಾಸ್ವಾಮಿ.

### ಮತ್ತೊಬ್ಬ

ಮೊದಲನೆಯ ಪುಟದಲ್ಲಿ ದೊಡ್ಡಕ್ಷರಗಳಲ್ಲಿ ನಿನ್ನ ಪತ್ರಿಕೆಯಲ್ಲಿ ಛಾಪಿಸುವೆಯಾ ?

### ಸುದ್ದಿಗಾರ

ಅಯ್ಯೋ ಬಿಟ್ಟೇನೆಯೇ ? ತಾವು ಮಾತ್ರ ಉಸಿರಿಬಿಡಿ ಏನೆಂಬುದನ್ನು.

### ಮತ್ತೊಬ್ಬ

ಅದಂತೂ ಆಯಿತು. ನಿನ್ನ ಪತ್ರಿಕೆಯನ್ನು ಸರದಾರರು, ಪಂಡಿತರು ಓದುತ್ತಾರೇನು ?

### ಸುದ್ದಿಗಾರ

ಏನುಸ್ವಾಮಿ, ಹೀಗೆ ಅಪ್ಪಣೆ ಕೊಡುಸುತ್ತೀರಾ ? ಅವರು ಓದದೇ ಇರಲು ನನ್ನದೇನು ಕನ್ನಡ ಪತ್ರಿಕೆಯೆಂದು ತಿಳಿದಿರಾ ?

**ಮತ್ತೊಬ್ಬ**

ಬರೆಮಕೊಳ್ಳಿ ಹೇಳುತ್ತೇನೆ. ಇಲ್ಲವಾದರೆ ನಾನು ಹೇಳಿದ ಮೇಲೆ ಅದನ್ನು ಹಸ ಮಾಡಿ ನೀವೇ ಬರೆದುಕೊಂಡು ನನಗೊಂದು ಪ್ರತಿ ಕೊಡಿ. ಪಟೇಲ ಸಾಹೇಬರು ನಮ್ಮ ಮೂವತ್ತು ವರ್ಷಗಳ ಕೇಳಿಕೆಯನ್ನು ಮಾನ್ಯ ಮಾಡಿ ಪ್ರಜಾಸತ್ತೆಯ ಈ ಕಾಲದಲ್ಲಿ ಪ್ರಜೆರ ಬೇಡಿಕೆಗೆ ಗೌರವ ಕೊಟ್ಟು ಗಾಂಧೀ ಪ್ರಾಂತವೆಂದು ಹೆಸರಾಂತವಾದ ಕರ್ನಾಟಕಕ್ಕೆ ಜನವರಿ ೨೬ರ ಒಳಗಾಗಿ-ಅಷ್ಟು ದೂರವಾದರೂ ಏಕೆ-ಇಂದೇ ಈಗಲೇ, ಈ ಕ್ಷಣವೇ ನನ್ನ ಕೈಯಲ್ಲಿಯೇ ನಮ್ಮ ಪ್ರಾಂತವನ್ನು ಕೊಡಬೇಕು. ಕೊಡುತ್ತಾರೆ,ಕೊಟ್ಟೇ ಕೊಡುವರು.

**ಸುದ್ದಿಗಾರ**

ಇಲ್ಲವಾದರೆ

**ಒಬ್ಬ**

ಢಂ ಢುಂ ಢಡಂ....

**ಮತ್ತೊಬ್ಬ**

ಕೊಂಚ ನಿಲ್ಲಿ. ಇಲ್ಲವಾದರೆ ಇಡೀ ಕರ್ನಾಟಕದಲ್ಲಿ ಮೂಲೆ ಮೂಲೆಗಳಲ್ಲಿ ಎರಡು ಕೋಟಿ ಜನಸಮುದಾಯದಲ್ಲಿ,ರೊಚ್ಚಿಗೇಳಬಹುದಾದ ಕನ್ನಡ ವೀರರಲ್ಲಿ....

**ಒಬ್ಬ**

**(ಆವೇಶದಿಂದ)** ಶಹಬಾಸ್,

**ಮತ್ತೊಬ್ಬ**

ಸ್ವತಂತ್ರ ಭಾರತವನ್ನು ಕಟ್ಟಲು ಪ್ರಾಣದ ಹಂಗು ತೊರೆದು ಕಾದಾಡಿದ ಕನ್ನಡ ವೀರ ಪ್ರಭುತಿಗಳಲ್ಲಿ ಗಳಿಸಿದ ಸ್ವಾತಂತ್ರವನ್ನು ಉಳಿಸಲೋಸುಗ ಪ್ರಾಂತವಾಗಲೇ ಬೇಕೆಂದು ಮರದೆತ್ತರ ಜಿಗಿದಾಡುತ್ತಿರುವ ಭೂಪರ ಬಾಯಲ್ಲಿ ಸತ್ಯಾಗ್ರಹದ ಮಾತು ಎಂದೂ ಬರಲಾರದು, ಬರಕೂಡದು, ಬರುವದಿಲ್ಲ.

**ಒಬ್ಬ**

**(ಕಾತರನಾಗಿ)** ಅಯ್ಯೊ ! ಅಯ್ಯೊ !! ಇದೇನು ಹೇಳಿದಿರಿ ? ಕನ್ನಡ ಮಾತೆಗೆ....

**ಮತ್ತೊಬ್ಬ**

(ಸುದ್ದಿಗಾರನನ್ನು ಕುರಿತು ಅವಸರದಿಂದ) ನೀವು ಹೋಗಿರಿ ಇನ್ನು. ಜಾಗ್ರತೆಯಾಗಿ ಓಡಿರಿ. ನಾವು ಸರದಾರರನ್ನು ಕಾಣುವ ಮೊದಲೇ ಇದು ಅವರ ಕಣ್ಣಿಗೆ ಬೀಳಬೇಕು. ಇಲ್ಲವಾದರೆ....

(ಸುದ್ದಿಗಾರನು ನಗುತ್ತ 'ಅಸ್ಲ ಕಾಯ್' ಎಂದು ಓಡುವನು)

**ಒಬ್ಬ**

(ಕಣ್ಣು ಕಿಸಿದು) ಮಹಾಸ್ವಾಮಿ ತಾವೊಬ್ಬರೇ ಹೋಗಿಬನ್ನಿ. ನಾನು ಸರದಾರರ ಭೆಟ್ಟಿಗೆ ಬರುವದಿಲ್ಲ. ನನಗೆ ಪ್ರಾಂತವೂ ಬೇಕಿಲ್ಲ.

**ಇನ್ನೊಬ್ಬ**

ಇದೇನು ಅನ್ಯಾಯ ? ಈ ಮಾತು ನಿನ್ನ ಬಾಯಿಂದ !

**ಒಬ್ಬ**

ಬೇಡ, ಬೇಡ ! ನಮ್ಮ ಮಂದಾಳುಗಳು--ಅಲ್ಲ ಕ್ಷಮಿಸಿ, ಮುಂದಾಳುಗಳು–ಸುದ್ದಿಗಾರನಿಗಿತ್ತ ಪ್ರಕಟನೆಯನ್ನು ಕೇಳಿದ ಮೇಲೆ ನನಗೆ ವಜ್ರಾಘಾತವಾಯಿತು. 'ಬಿಡಬೇಡ ಅಳಿಯಾ, ಸಿಗಬೇಡ ಮಗಳೇ' ಎಂಬಿವರ ಹೇಳಿಕೆಯನ್ನು ನಾನು ಕೇಳಿ ಹೇಗೆ ಸುಮ್ಮನಿರಲಿ ? ನಾಳೆ ನಾನು ಊರಿಗೆ ಹೇಗೆ ಹೋಗಲಿ ? ಪೂಮಾಲೆಗಳನ್ನು ಅರ್ಪಿಸಿ ನಮಸ್ಕರಿಸಿ ನನ್ನನ್ನು ದಿಲ್ಲಿಗೆ ಕಳಿಸಿದ ಹೆಂಡತಿಗೆ ಹೇಗೆ ಈ ಮುಖವನ್ನು ತೋರಿಸಲಿ ? (ಮುಖವನ್ನು ಎರಡೂ ಕೈಗಳಿಂದ ಮುಚ್ಚಿಗೊಂಡು ಹೋ ಎಂದು ಅಳುವನು)

**ಮತ್ತೊಬ್ಬ**

(ಸಮಾಧಾನ ಪಡಿಸುತ್ತ) ಅಯ್ಯೋ, ಪೆಚ್ಚೇ ! ಇದೇನಾ ನಿನ್ನ ರಾಜಕಾರಣದ ಅನುಭವ? ಅನುಗಾಲವೂ ಒಂದೇ ಮಾತನ್ನೇ ಆಡಬೇಕೆಂಬುವ ಹಟವಿದ್ದರೆ ನಿನಗೆಂದೂ ರಾಜಕಾರಣದಲ್ಲಿ ಜಯವಿಲ್ಲ. ಆಡಿದಂತೆ ಮಾಡಲೇಬೇಕೆಂಬುವವನು ಮೂರ್ಖ ಕಾಣಯ್ಯಾ ! ಆಡಿದಂತೆ ಯಾರು ಮಾಡಿದ್ದಾರೆ? ಪ್ರಾಂತದ ಮಾತು ಕೊಟ್ಟ ಕಾಂಗ್ರೆಸ್ಸು ಇಂದೇನು ಮಾಡಿದೆ ? ಪ್ರಾಂತಕ್ಕಾಗಿ ಪ್ರಾಣವನ್ನೂ ಕೊಡುತ್ತೇನೆಂದು ಉಡಿಪಿಯಲ್ಲಿ ಹೇಳಿದ ಹಿರಿಯರು ಇಂದು ಮಂತ್ರಿ ಸಂಬಳದಲ್ಲಿ ಒಂದಾಣೆಯನ್ನಾದರೂ ಕೊಡಲಿಲ್ಲ. ಅರ್ಜುನಾ, ನೀನು ದಿಙ್ಮೂಢನಾಗಿರುವಿ. ನಿನ್ನನ್ನು ಪ್ರಾಮಾಣಿಕತೆಯೆಂಬ ಅಜ್ಞಾನವು ಆವರಿಸಿದೆ. ಇಗೋ ಕಣ್ಣು ತೆರೆದು ನೋಡು, ನನ್ನ ನಿಜಸ್ವರೂಪವನ್ನು ನಾನೇ ನಿನ್ನ

ಕೃಷ್ಣ, ನನ್ನ ಮಾತೇ ಇಂದು ಗೀತೆ. ರಾಜಕಾರಣದ ಧರ್ಮ ಸೂಕ್ಷ್ಮವನ್ನು ಕೇಳು.

(ಕಂದ)

ಯಾವಾಗಾವುದು ಪ್ರಸ್ತುತ
ಅವಾಗಾ ಮಾತನಾಡಿ ಅನ್ಯರ ಮನವನ್
ನೋಯಿಸದಲೆ ತಾನೊಯ್ಯದೆ
ತಪ್ಪಿಸಿಕೊಂಬವ ಜಾಣ ರಾಜಕಾರಣಿ ಎಂದಾ ॥

**ಒಬ್ಬ**

( ಮೇಲೆದ್ದು ಮತ್ತೊಬ್ಬನ ಎರಡೂ ಕೈಗಳನ್ನು ಹಿಡಿದು ) ಹಾ ಕೃಷ್ಣಾ ನಾನೇ ಧನ್ಯನಾದೆನು. ಜೇಲಿನಲ್ಲಿ ಬಿದ್ದಾಗ ನೀನು ಗೀತೆಯನ್ನೋದಿದ್ದು ಇಂದ ಸಾರ್ಥಕವಾಯಿತು. ನಡೆ ಮುಂದೆ ಸಾರಥಿಯಾಗಿ, ನಾನು ತಬ್ಬಲಿಯಂತ ನಿನ್ನನ್ನು ಪಟೇಲರ ಸದನಕ್ಕೆ ಹಿಂಬಾಲಿಸುತ್ತೇನೆ.

(ಇನ್ನೊಬ್ಬನು ಒಬ್ಬನ ಕಂಣೊರೆಸುವನು. ರಥವು ಸರದಾರರ ಅರಮನೆಯ ಹೆಬ್ಬಾಗಿಲವರೆಗೂ ಓಡಿಬಂದು ಅಲ್ಲಿ ಹಟತ್ತಾಗಿ ತಟಸ್ಥವಾಗುವದು. )

**ಮತ್ತೊಬ್ಬ**

( ರಥದಲ್ಲಿ ಎದ್ದು ನಿಂತು, ಒಬ್ಬ ಇನ್ನೊಬ್ಬರನ್ನು ಕುರಿತು ) ಅಗೋ ಅಲ್ಲಿ ನೋಡಿ, ಎದುರಿಗಿರುವದೇ ಶೂರ ಸರದಾರರ ಅರಮನೆ. ಆ ಬದಿ ಕಿಟಕಿ ಕಾಣುತ್ತಿರುವದು ನೋಡಿ, ಅದೇ ಅವರು ಮಲಗುವ ಕೋಣೆ. ಅದರ ಈ ಬದಿ ಇರುವದೇ ಅವರ ಮಹಾ ಮಹಲು. ಇದೇ ಮಹಲಿನಲ್ಲಿಯೇ ಅನೇಕ ಮಹರಾಜರುಗಳು ಕರಗಿ ನೀರಾದರು.

**ಒಬ್ಬ**

ಮೈಸೂರ ಮಹರಾಜರು ?

**ಮತ್ತೊಬ್ಬ**

ಈಗವರ ಸಮಾಚಾರ ಬೇಡ. ಅದು ರಾಜಕಾರಣಿಯ ಲಕ್ಷಣವಲ್ಲ ಆದುದನ್ನು ಕಂಡು ಸಂತಯಿಸು, ಆಗದಿದ್ದುದಕ್ಕೆ ಅಳಬೇಡ !

**ಇನ್ನೊಬ್ಬ**

(ಆಶ್ಚರ್ಯದಿಂದ) ಇದೇನು ? ಪಟೇಲರ ಮನೆಯ ಮುಂದೆ **ಕನ್ನಡ** ಬೋರ್ಡು ನೇತಾಡುತ್ತಿದೆ ! ದಿಲ್ಲಿಯೂ ಕರ್ನಾಟಕದಲ್ಲಿ ಸೇರುವದೋ ಏನನ್ನು ಬರೆದಿದ್ದಾರೆ ಅದರ ಮೇಲೆ ?

### ಮತ್ತೊಬ್ಬ

ಬಹುಶಃ ಕನ್ನಡ ವೀರರಿಗೆ ಸ್ವಾಗತವಿರಬೇಕು ಅದು. ನನಗೆ ಇಲ್ಲಿಂದ ಕಾಣದು. ನನಗೆ ದೂರ ದೃಷ್ಟಿ ಇಲ್ಲ.

### ಒಬ್ಬ

ನಿಜವಾಗಿಯೂ ನಿಮಗೆ ದೂರ ದೃಷ್ಟಿ ಇಲ್ಲ. ಇದ್ದಿದ್ದರೆ ನೀವು ಇಲ್ಲಿಯವರೆಗೂ ಏಕೆ ಬರುತ್ತಿದ್ದಿರಿ ? ಸರಿಯಾಗಿ ಓದಿರಿ ಅದನ್ನು, ದೊಡ್ಡಕ್ಷರಗಳಲ್ಲಿ 'ಎಚ್ಚರಿಕೆ' ಎಂದು ಬರೆದಿದೆ ನೋಡಿ. (ಸಮೀಪ ಬಂದು ಓದುವನು) "ಎಚ್ಚರಿಕೆ ! ಪ್ರಾಂತಕ್ಕಾಗಿ ಕಾಡುವ ಕನ್ನಡಿಗರಿಗೆ ಪ್ರವೇಶವಿಲ್ಲ" (ಮೂರ್ಛೆ ಹೋಗುವನು).

### ಇನ್ನೊಬ್ಬ

(ಕಾತರನಾಗಿ) ಮುಂದೇನು ಗತಿ ?

### ಮತ್ತೊಬ್ಬ

ಇವನನ್ನು ಹೇಗಾದರೂ ಮಾಡಿ ಇಲ್ಲಿಂದ ಒಯ್ಯಬೇಕು. (ತಲೆಯನ್ನೊಬ್ಬರು ಕಾಲನ್ನೊಬ್ಬರು ಹಿಡಿದು) ಬೊಲೋ, ಸರದಾರಕೀ ಜೈ

(ಮಾಯವಾಗುವರು)

೩

(ಜನರ ಅರ್ಭಟಕ್ಕಾಗಿ ಸಭೆ ನೆರೆಯಬೇಕೆಂದು ಡಂಗುರ ಸಾರಲಾಗುವದು. ಜನತೆ ಮೇಲ್ದಪ್ಪಿ ಗುಂಪು ಗುಂಪಾಗಿ ಬಂದು ನಿಲ್ಲುವರು.)

### ಮತ್ತೊಬ್ಬ

ಕನ್ನಡ ವೀರರೇ ! ಕೊಂಚ ದಯವಿಟ್ಟು ಕೇಳಿರಿ. ನಾವು ಮಾಡಲೇಬೇಕಾದುದೆಲ್ಲವನ್ನೂ ಮಾಡಿದ್ದೇವೆ. ಮಾಡುತ್ತಿದ್ದೇವೆ. ಈಗ ಸದ್ಯಕ್ಕೆ ನೀವು ಮಾತ್ರ ನಮ್ಮ ಮೇಲೆ ವಿಶ್ವಾಸವಿಟ್ಟು ಹಿಂದಿರುಗಿರಿ. ನಿಮ್ಮ ಮನೆಗಳಿಗೆ ಸಾಗಿರಿ.

### ಜನತೆ

(ಒಂದೇ ದನಿಯಿಂದ) ಸಭೆಯನ್ನು ಎಂದು ಕರೆಯುತ್ತೀರಿ.

### ಮತ್ತೊಬ್ಬ

ಕರೆಯುತ್ತೇವೆ. ಅಷ್ಟೇಕೆ ಅವಸರ ? ತಪ್ಪದೆ ಕರೆಯುತ್ತೇವೆ.

**ಜನತೆ**

(ರೊಚ್ಚಿಗೆದ್ದು) ಎಂದು ? ಯಾವಾಗ ಕರೆಯುತ್ತೀರಿ ?

**ಒಬ್ಬ**

( ಮೂರ್ಛೆಯಲ್ಲಿಯೇ ) ಕರೆಯುತ್ತಾರೆ, ನಿಜವಾಗಿ ಕರೆಯುತ್ತಾರೆ. ಕರೆದೇ ತೀರುತ್ತಾರೆ. ಪ್ರಾಂತ ಬಂದ ಮರುದಿನವೇ ಸಭೆ ಸೇರುತ್ತದೆ. ಢಂ, ಢುಂ, ಢಢಂ.

( ಮತ್ತೊಬ್ಬ ಮತ್ತು ಇನ್ನೊಬ್ಬ ಇವನ ಬಾಯಿಯನ್ನು ಗಟ್ಟಿಯಾಗಿ ಮುಚ್ಚುವರು. )

**ಮತ್ತೊಬ್ಬ**

(ಕೈ ಮುಗಿದು) ದಯವಿಟ್ಟು ಎಲ್ಲರೂ ಹೋರಡಿ. ನಮ್ಮ ಗೊತ್ತುವಳಿಯು ನಾಳೆ ನಿಮಗೆ ಹೇಗೂ ತಿಳಿಯುತ್ತದೆ. ಪ್ರಾಂತವನ್ನು ಮಾತ್ರ ತಂದೇ ತೀರುತ್ತೇವೆ.

**ಜನತೆ**

(ಒಮ್ಮೆಲೆ) ಬೋಲೋ, ಕರ್ನಾಟಕ ಮಾತಾಕೀ ಜೈ ! ( ಎಲ್ಲರೂ ಹೋಗುವರು )

(ಮರುದಿನ ಬೆಳಗಿನ ಪತ್ರಿಕೆಯಲ್ಲಿ ಮತ್ತೊಬ್ಬನ ಭಾಷಣದ ವರದಿಯು ಬಂದಿತು.)

ಕನ್ನಡ ವೀರರೇ !

ಏಳಿರಿ, ಏಳಿರಿ ಈ ರೀತಿ ಮಲಗುವದು ಸರಿಯಲ್ಲ. ನಾವು ಏಳಬೇಕು, ಎದ್ದು ತೂಕಡಿಸಬೇಕು. ತೂಕಡಿಸಿ ಓಡಬೇಕು.ಜನತೆ ನಮ್ಮ ಕಡೆ ನೋಡುತ್ತಲಿದೆ. ಎರಡೂ ಕಣ್ಣುಗಳಿಂದ ನೋಡುತ್ತಿದೆ. ಪ್ರಾಣದಕಿಂತಲೂ ಪ್ರಾಂತವು ಹೆಚ್ಚು. ಪ್ರಾಂತದಕಿಂತಲೂ ಮಾನವು ಹೆಚ್ಚು. ಮಾನವನ್ನು ಉಳಿಸಿಗೊಳ್ಳಲು ಮೌನವು ಬೇಡ. ನಮಗಾಗಿರುವ ಅವಮಾನವನ್ನು ನುಂಗಿಕೊಳ್ಳುವದು ಬೇಡ. ಈ ಕ್ಷಣವೇ ಈ ಗೊತ್ತುವಳಿಯನ್ನು ಪಾಸು ಮಾಡಿರಿ. ಅಂಜಬೇಡಿರಿ. ಮುಂದೆ ದೂಡಿರಿ. ಜೈ ಹಿಂದ ! ಜೈ ಕರ್ನಾಟಕ.

## ಒಬ್ಬನನ್ನು ಬಿಟ್ಟು ಎಲ್ಲರೂ ಒಪ್ಪಿ
## ಸರ್ವಸಮ್ಮತದಿಂದ ಪಾಸಾದ ಮಹತ್ವದ ಗೊತ್ತುವಳಿ

"ದೇಶ ಕಾಲಮಾನದ ಪರಿಸ್ಥಿತಿಯನ್ನು ಅವಲೋಕಿಸಿ ಸಹಾರಾ ಮರುಭೂಮಿಯಲ್ಲಿ ಇಂದು ನೀರು ನೆಳಲು ಇಲ್ಲ, ಸಮುದ್ರದಲ್ಲಿ ಕುಡಿಯುವ ನೀರಿಲ್ಲ. ಬಾಸುಂದಿಯಲ್ಲಿ ಉಪ್ಪು ಇಲ್ಲ, ಕ್ವಯಿನಾ ಇನ್ನೂ ಸಿಹಿ ಆಗಿಲ್ಲ. ಇವೆಲ್ಲ ಅಂತಹ ಕಷ್ಟಗಳನ್ನು ತಿಳಿದು ಪ್ರಾಂತದ ಪ್ರಶ್ನೆಯನ್ನು ಮುಂದೂಡಿರೆಂದು ಅಂಗಲಾಚಿ ಬೇಡಲು ಈ ಸಭೆಯು ನಿಶ್ಚಯಿಸಿ ನಾವು ಕೊಡಬೇಕೆಂದು ಅಂದುಕೊಂಡಿದ್ದ ರಾಜೀನಾಮೆಗಳ ಪ್ರಕರಣವನ್ನು ನೀವು ಮರೆತು ಬಿಟ್ಟು, ಅದನ್ನು ನಮ್ಮನಮ್ಮವರಿಂದ ಪರತು ತೆಗೆದುಕೊಳ್ಳಲು ಅನುಮತಿ ಬೇಡಲು ಒಂದು ನಿರ್ದಿಷ್ಟ ವಿಶಿಷ್ಟ ಶಿಷ್ಟಮಂಡಳಿಯನ್ನು ದಿಲ್ಲಿಗೆ ಹಾರಿಸತಕ್ಕದ್ದು."

ಕರ್ನಾಟಕ್ ಮಾತಾಕೀ ಜೈ

**ಒಬ್ಬ**

(ಮೂಗಿನಿಂದ) ಕೆ. ಪಿ. ಸಿ. ಸಿ. ಮಾನ ಸಂರಕ್ಷಣಾ ನಾಟಕ ಏಕಾಂಕೇ ತೃತೀಯಾಧ್ಯಾಯೇ ಸಮಾಪ್ತಿ.

---

# ಕದಲಾರತಿ

## ಪಾತ್ರಗಳು

| | |
|---|---|
| ೧. **ಪದ್ಮಮ್ಮ** | ತವರಿನಿಂದ ಧನಿಕಳಾಗಿದ್ದ ಓರ್ವ ಮಹಾ ಪ್ರಾಣಿ. ಸ್ವಗೃಹೇ ಸರ್ವಾಧಿಕಾರಿ. |
| ೨. **ವಕೀಲ ಪ್ರತಾಪರಾಯರು** | ಇಂಟರ್, ಹೆಲ್‌ಹೆಲ್ಪಿ; ಆ ಮಹಾಪ್ರಾಣಿ ಯಿಂದ ಕೈ ಹಿಡಿಸಿಗೊಂಡ ಅಲ್ಪಪ್ರಾಣಿ. |
| ೩. **ನಿರ್ಮಲ** | ಇವರೀರ್ವರ ಸುಪುತ್ರಿ; ಮದುವೆಯಾಗಿ ಏಳು ವರ್ಷಗಳಾದರೂ ಪತಿದೇವನ ಮುಖವನ್ನೇ ನೋಡದ ಪುಣ್ಯಾತ್ಮಳು. |
| ೪. **ತಿಂಮ** | ನಿರ್ಮಲಳ ತಂಮ. |
| ೫. **ರಘುಪತಿ** | ಪದ್ಮಮ್ಮಳ ಹಣದ ಮೇಲೆ ಬಿ. ಎ. ಮುಗಿಸಿ, ಮೋಟಾರ್‌ಸೈಕಲ್ ಬೇಕೆಂದು ಮುನುಸುಗುಟ್ಟಿರುವ ಅಳಿಯದೇವರು. |
| ೬. **ಹೊಸಬ** | ಅವನಾರೋ ಏನೋ ! |
| ೭. **ಡ್ರೈವರ್** | ಡ್ರೈವರು. |

( ಮನೆ-ಪದ್ದಮ್ಮನದೇ, ಸಮಯ ಸುಮಾರು ನಾಲ್ಕು ಗಂಟೆ, ಸಾಯಂಕಾಲ ಪದ್ದಮ್ಮ ಕಾಲುಚಾಚಿ ತೂಗು ಮಂಚದಲ್ಲಿ ಕುಳಿತಿದ್ದಾಳೆ. ಓದಲು ಕೈಯಲ್ಲಿ ಪುಸ್ತಕವಿಲ್ಲ, ತಲೆಯಲ್ಲಂತೂ ಎಂದೂ ಏನೂ ಇಲ್ಲ. ಗೇಣುದ್ದನ್ನ ಕೀಲಿಕೈಗಳುಳ್ಳ ದೊಡ್ಡ ಕುಚ್ಚು ಸೊಂಟದಲ್ಲಿ ಸಿಕ್ಕು ಹೊಟ್ಟೆಗೆ ಚುಚ್ಚುತ್ತಿದೆ. ಇನ್ನೊಂದು ಕುಚ್ಚನ್ನು ಕೈಲಿ ಹಿಡಿದು ಅದರಲ್ಲಿರುವ ಬೆಳ್ಳಿಯ ಕಡ್ಡಿಯಿಂದ ಕಿವಿಯನ್ನು ಬಗಿಯುತ್ತ ಮುಖವನ್ನು ಸಾಧ್ಯವಾದಷ್ಟು ಸೊಟ್ಟಮಾಡಿದ್ದಾಳೆ. ಆ ಬದಿ ಇರುವ ಆಫೀಸ ಕೋಣೆಯಿಂದ ಒಳಬಂದ ವಕೀಲ ಪ್ರತಾಪರಾಯರು ತಮ್ಮ ಸಾಧ್ವಿಯ ಮುಖನೋಡಿ ಕೊಂಚವೂ ಅಂಜದೆ ಅಳುಕದೆ-ಆದರೆ ಅನುಮಾನಿಸುತ್ತ )

### ಪ್ರತಾಪರಾಯರು

ಹೂಂ....ಇದೂ....ಹೂಂ....ಬೀಗದ ಕೈ....ಆ ಕಪಾಟದ್ದೂ....ಆ.... ಅದೂ....ಬೀಗದ ಕೈ....

### ಪದ್ದಮ್ಮ

( ಸಹಜವಾದ, ಗದರಿಸುವ ದನಿಯಲ್ಲಿ ) ಯಾವ ಕಪಾಟಿದ್ದು ? ಯಾಕೆ, ಅದು ಯಾಕೆ ಬೇಕಾತು ಈಗ ?

### ಪ್ರತಾಪರಾಯರು

ಸಣ್ಣ ಕಪಾಟದ್ದೂ....ಸ್ವಲ್ಪ ಬೇಕಾಗಿತ್ತೂ....ಅದಕೇ....ಅದರಾಗೆ ಉಳದದೆ ನನ್ನ ಗಂಜಿ ರುಮಾಲು....

### ಪದ್ದಮ್ಮ

ಇವತ್ತು ಅದು ಯಾಕೆ ಬೇಕಾತು ನಿಮಗೆ ? ನೀವೇನು ಕೋರ್ಟಿನಾಗೆ ಹೋಗಿ ಮೇಜು ಗುದ್ದಿ ಗುದ್ದಿ ಜಜ್ಜಿನ್ನ ಅಂಜಿಸಿ....

### ಪ್ರತಾಪರಾಯರು

ಅಲ್ಲೀ....ಫೋಟೋ ಅದೆ ಇವತ್ತು ಫೊಟೋ; ಹಳೆ ಮುನಸೀಫರಿಗೆ ವರ್ಗ ಆತು ಅಂತಾ ಚಹಾಕೊಡ್ತಾರೆ ವಕೀಲ್ರೆಲ್ಲ....ಅದೇಕೆ....ನಾನೂನೂ....

### ಪದ್ದಮ್ಮ

ಅಗತ್ಯ ತೊಗಳ್ರಿ, ಅದಕ್ಯಾಕೆ ನಾ ಬ್ಯಾಡ ಅನ್ನಲಿ. ಏನಾರೆ ನೆಪದಿಂದ ನೀವಿಷ್ಟು ಕೋರ್ಟಿಗೆ ಹೋದರೆ ಸಾಕು. ಹ್ಯಾಗೂ ಹೋಗೋದು ಹೋಗ್ತೀರಿ,

ಹಾಗೆ ನಿಮ್ಮ ಸೀನಿಯರ್ ರಾಮುಸ್ವಾಮಿ ಅವರ ಮೋಟಾರಿಷ್ಟು ಕಳಿಸ್ರಿ, ಆರು ಘಂಟೀಗೆ.

### ಪ್ರತಾಪರಾಯರು

ಅಲ್ಲಾ....ನೀನು....ಬಜಾರದಾಗೆ....ಅಲ್ಲಾ ಇಲ್ಲಾ....ನೀನು ಗುಡಿಗೆ ಏನಾದರೂ ಹೋಗಬೇಕೇನು ?....ಅಂದ್ರೆ....ನಾನೂ....ಅಲ್ಲೀಯಿಂದ....

### ಪದ್ದಮ್ಮ

ಗುಡಿ ಇಲ್ಲ, ಗುಂಡಾರ ಇಲ್ಲ ಮಾರಾಯ್ರೆ. ಎಂದೆ ದೇವ್ರು ಆ ಅಳಿಯನ್ನ ಗಂಟು ಹಾಕಿದನೊ ಅಂದೇ ಹೋತು ನನಗೆ, ಆತನ ಮ್ಯಾಲೆ ಇಶ್ವಾಸ.

### ಪ್ರತಾಪರಾಯರು

ಛೆಛೆ ! ಆತೇನು ಮಾಡ್ಯಾನೆ ಪಾಪ !

### ಪದ್ದಮ್ಮ

( ಒಂದೇ ಗುಡುಗಿನಲ್ಲಿ ) ಸಾಕು, ಸುಮ್ಮನಾಗರಿ, ನಾನೊಲ್ಲೆ. ಆ ಸುಡುಗಾಡು ಅಳಿಯನ್ನ ಕೊಂಡಾಡಬ್ಯಾಡರಿ ನನಮುಂದೆ. ಅದೇನೊ ಅಂತಾರಲ್ಲ ಹಾಗೆ. ಎಷ್ಟು ಓದಿದರೇನು, ಬೀಯೆ ಓದಿದರೇನು ಬುದ್ಧಿ ಇಲ್ಲದಮ್ಯಾಲೆ. ಅತ್ತೀ ದುಡ್ಡಿಗೆ ಬಾಯಿತಕ್ಕೊಂಡು ಕೂತ ಅಳಿಯನ್ನ....

### ಪ್ರತಾಪರಾಯರು

ಛೇ ನಿನ, ಆತನ್ನಲ್ಲೇ ನಾನಂದದ್ದೂ. ಪಾಪ ! ದೇವ್ರೇನು ಮಾಡ್ಯಾನೂ ಅಂದೆ. ಅಳಿಯಂದು ಛಲೋ ತಪ್ಪು ಬಿಡು.

### ಪದ್ದಮ್ಮ

( ಅಣಕಿಸುವ ದನಿಯುಲ್ಲಿ ) ಆತಂದೇನು ತಪ್ಪು, ಪಾಪ ! ನಂದು ತಪ್ಪು ಆಗ್ಯಾದೆ. ತಿಂಗಳಾ ತಪ್ಪದೆ ಮನಿಯಾರ್ಡರು ಕಳಿಸೀ ಕಳಿಸೀ ನಾಲ್ಕು ವರ್ಷ ಮೇಯಿಸಿದ್ದಕ್ಕೆ ಅವನದೂ ತಲಿ ತಿರಿಗಿ ಹೋಗ್ಯಾದೆ. ನಾನು ಕೈ ಬಿಟ್ಟಿದ್ರೆ ತಿಳೀತಿತ್ತು, ಅವರಮ್ಮ—ಆ ಕರೀಮಣಿ ಕಂಚಿ ಕುಂಕುಮದ ಸಾವಿತ್ರಮ್ಮ—ಏನು ಓದುಸ್ತಿದ್ಲು ಅಂಬೋದು. ಈ ಪುಣುಪುತ್ರನ್ನ ಚ್ಯಾದ ಅಂಗಡ್ಯಾಗೆ ಇಡತಿದ್ಲು ದುಡಿಲಿಕ್ಕೆ, ಚ್ಯಾದ ಅಂಗಡ್ಯಾಗೆ.

### ಪ್ರತಾಪರಾಯರು

ಆಕೀದು ತಪ್ಪಿಲ್ಲ ಅಂತೀನೀ. ಇದೆಲ್ಲ ಕಿಳ್ಳಿ ಬಂದಿರೋದು ಅವರಪ್ಪ—ಆ ಸುಬ್ಬಣಾಚಾರಿಯಿಂದ ನೋಡು. ಅವನಿಗೂ ದುಡ್ಡಿಗೂ ಗಂಟು.

ಪದ್ಮಮ್ಮ

ಪ್ರಾಣ ಹೋದರೂ ಅವನು ಇನ್ನ ನನ್ನ ಕಪರ್ದಿ ಕಾಸು ಕಂಡಾನೇನು ?
ರ ಮಗ ಅವರ ಮನ್ಯಾಗೇ ಇರ್ಲಿ, ನನ್ನ ಮಗಳು ನನ್ನ ಮನ್ಯಾಗೇ ಇರ್ಲಿ.
ಗೆಲ್ಲ ಬೆದರಿಕಿ ಹಾಕಿ ಹಣ ಕಸಗೊಂಡ್ರೆ ಭಾಳಾ ಆತು. ಏನು ತಿಳದಾರೋ
ಮ್ಮ ಅಂದ್ರೆ.

ಪ್ರತಾಪರಾಯರು

ಅಲ್ಲಾ....ಅದು ಸೈ ಬಿಡು....ನಿನ್ನಾ ಅವರಾ ಗುದ್ಯಾಟದಾಗೆ ಸುಮ್ಮ-
ನ್ನೆ ಆ ಹುಡುಗೀ ಬಾಳಿವಿ ಹಾಳಾತು.

ಪದ್ಮಮ್ಮ

( ತಾತ್ಸಾರವಾಗಿ ) ನೀವು ಸುಮ್ಮನಿರ್ರಿ, ನಾನೊಲ್ಲೆ. ಹುಡಿಗಿ ಬಾಳಿವಿ
ಳಾತಂತೆ. ಇರ್ತಾಳೆ ಮನ್ಯಾಗೆ. ಗಂಡ್ಸನಮಗ ಆಗಿ. ಇದ್ದಾಳೊ ಇಲ್ಲೋ ಈ
ಪ್ರತ್ತು ವರ್ಷ ? ಮದಿವಿ ಆಗೇ ಏಳು ವರ್ಷ ಆತೆಲ್ಲಾ ಈ ದೀಪಾವಳೀಗೆ....
ರ ಬೆದರಿಕೀಗೆ ಸೊಪ್ಪುಹಾಕಿ ಅಳಿಯಾಗೆ ಮೋಟಾರಸೈಕಲ್ಲು ತಂದು
ಡ್ಲೇನು ?

ಪ್ರತಾಪರಾಯರು

ಅಲ್ಲಾ....ಆ ಹುಡುಗೇನೊ ಒಂದೂ ಕೇಳಿಲ್ಲ, ಪಾಪ !

ಪದ್ಮಮ್ಮ

ಆತ ಅಲ್ಲ, ಅವರಪ್ಪ ಕೇಳ್ಯಾನೆ. ಸ್ಪಷ್ಟ ಪತ್ರಾನೇ ಬರದಿದ್ದನಲ್ಲ ಆ
ಾರ್ರು, ಹೊಸ ಮೋಟಾರಸೈಕಲ್ಲು ಕೊಂಡು ಕೊಡದಿದ್ರೆ ನನ್ನ ಮಗನ್ನ
ಪಾವಳಿಗೆ ಕಳಸೂದಿಲ್ಲಾ ಅಂತ. ನಿಮ್ಮ ಮಗಳ ವಗತನಕ್ಕೆ ಇದರಿಂದ
ೀಕಾ ಆದೀತು ಅಂತ ಎಚ್ಚರಿಕಿ ಬ್ಯಾರೆ ಕೊಟ್ಟಿದ್ದಾ. ಏನು ತಿಳದಾರೊ
ರು, ಪದ್ಮಮ್ಮನ ದುಡ್ಡು ಅಂದ್ರೆ ? ಇವತ್ತು ಮೋಟಾರಸೈಕಲ್ಲು ಕೊಟ್ರೆ,
ಳೆ ಇಮಾನ ಬೇಡ್ತಾನೆ ಆ ಆಚಾರಪ್ಪ.

ಪ್ರತಾಪರಾಯರು

ಈಗ ಏನೋ, ಆ ಹುಡುಗನ ಮನಸು ಬದಲಾಗ್ಯದಂತೇಳು.

ಪದ್ಮಮ್ಮ

ಹೂಂ, ಆಗ್ತದೆ ಬದಲು. ತಂದೀಗಿಂತ ಕಲ್ಲು ಮನಸ್ಸು ಅವಂದೂನು,
 ತಿಳಿದೀರಿ ನೀವು ರಘುಪತಿರಾಯ ಅಂದ್ರೆ ?

### ಪ್ರತಾಪರಾಯರು

ಅಲ್ಲೇ, ನೀನು ಯಾವಾಗಿಂದೊ ಕಿಗ್ಗಳನಾವು ಸಂವತ್ಸರದಾಗಿನ ಕತಿ ಹೇಳ್ತೀದಿ. ಮನ್ನೆ ಭಾಸ್ಕರ ಭಟ್ರು ಅವರ ಊರಿಗೆ ಹೋಗಿದ್ರಂತೆ ಅವರ ದುರಿಗೆ ರಘುಪತಿರಾಯನೇ ಅಂದನಂತೆ--'ನಮ್ಮಪ್ಪನ ಮಾತುಕೇಳಿ ಕೆಟ್ಟೆ ಭಟ್ರೆ' ಅಂತ....

### ಪದ್ದಮ್ಮ

(ನಡುವೆ ಬಾಯಿ ಹಾಕಿ) ಕೆಡಲಿಕ್ಕೇನು ಧಾಡಿ ? ಗಂಡ್ಸಾಗಿ ಹುಟ್ಯಾನೆ, ಒಂದಲ್ಲ ಹತ್ತು ಮಾಡಿಕೊತಾನೆ.

### ಪ್ರತಾಪರಾಯರು

ಅದೇ ಮಾತೆ ಅಂದ್ರಂತೆ ಭಾಸ್ಕರಭಟ್ರು. ಮದಿವಿ ಸುದ್ದಿ ಮಾತ್ರ ಎತ್ತ ಬ್ಯಾಡ್ರಿ ಅಂತಾನಂತೇ ಅವನು. ಋಣಾನುಬಂಧ ಇದ್ದರೆ ಇಂದಿಲ್ಲ ನಾಳೆ ನಿರ್ಮಲಾನ್ನ ಕೂಡಿಕೊಂಡೇನು ಅಂದನಂತೆ.

### ಪದ್ದಮ್ಮ

ನಾವಲ್ಲಿ ಬಿಡ್ರಿ, ಸಾಕು. ಆ ದಶರಥನ ಮಗ ರಾಮ ಭೂಲೋಕ ಬಿಟ್ಟು ಹೋಗೋ ಕಾಲಕ್ಕೆ ನಿಮ್ಮ ಆ ಗುಕ್ಕ ಅಳ್ಯಾನ ತಲಿಮ್ಯಾಲೇ ಕೈ ಇಟ್ಟು ಹೋಧಾಗ ಅದೆ. ಅದಕ್ಕೇ ತಂದೀ ನಾಲಗಿ ಮ್ಯಾಲೇ ನಡೀತಾನ. ನಿಮಗಂತೂ ಆ ಆಚಾರಿ ಹೆಸರೂ ಅಂದ್ರೆ ಸಿಂಹಸ್ವಪ್ನಾನೆ. ಆತನ್ನ ಕಂಡರೆ ಯಾಕಷ್ಟು ಅಂಜಿ ಸಾಯ್ತೀರೋ ದೇವ್ರೇ ಬಲ್ಲ.

### ಪ್ರತಾಪರಾಯರು

(ಪೌರುಷದಿಂದ) ಯಾರು ? ನಾನೇ ? ನಾನೇ ! ನಾನು ಅಂಜತೀನೇ ? ಆ ಆಚಾರೀಗೆ ? ಯಮನ ಅಪ್ಪ ಬಂದ್ರೂನು ಜುಂ ಅಂಬೊ ಘಟ ಅಲ್ಲೇ ನಾನು. ಏನು ತಿಳಿದೀ ಪ್ರತಾಪರಾಯ ಅಂದ್ರೆ ? ಹೋದ ಯುದ್ಧದಾಗೆ ಹೋರಾಡಿ........

**(ಸದ್ದಿಲ್ಲದೆ ಒಳಬಂದ ತಿಂಮ ತಂದೆಯ ಹಿಂದೆ ನಿಂತು ಒಮ್ಮೆಲೆ ಕೈಯಲ್ಲಿದ್ದ ಬೆಳ್ಳೊಳ್ಳಿ ಬಾಣವನ್ನು 'ಠಸ್' ಎಂದು ಹಾರಿಸುವನು. ಪ್ರತಾಪರಾಯರು 'ಐಯ್' ಎಂದು ಬೆಚ್ಚಿಬಿದ್ದು ಜಿಗಿದು ಹಾರುವರು.)**

**ಪದ್ಮಮ್ಮ**

(ಹನ್ನೆರಡಾಣೆ ಕೋಪಕ್ಕೆ ನಾಲ್ಕಾಣೆ ನಗುವನ್ನು ಬೆರಸಿ) ಏ ತಿಂಮಾ ನಿನ್ನ ಮೈ ಕಡೀತದೇನೊ ?

**ತಿಂಮ**

( ನಗುವನ್ನು ತಡೆಯಲಾರದೆ ) ಅಲ್ಲಿ ನೋಡಮ್ಮಾ, ಅಪ್ಪನ ಕೈಕಾಲು ನಡುಗ್ತಾ ಅವೆ.

**ಪ್ರತಾಪರಾಯರು**

ಮುಚ್ಚೊ ಬಾಯಿ ಮೂರ್ಖಾ ! ಯಾರೋ ನಿನಗೆ ಅದನ್ನ ಕೊಟ್ಟಮ್ಬು?

**ತಿಂಮ**

ಸೆಟ್ಟಿ ಅಂಗಡಿ ಆಟಂ ಬಾಂಬಪ್ಪ ಅದು. ನೀನು ಅದೆಷ್ಟು ಅಂಜಿ ಬಿಟ್ಟಿಲ್ಲಪ್ಪಾ, ಯುದ್ಧಕ್ಕೆ ಹೋಗಿದ್ದೆ ಅಂದಿ ?

**ಪದ್ಮಮ್ಮ**

ನಿನ್ನ ತಲಿ. ಹೋಗೋ ಹೊರಗೆ. ಅವಳು ಎಲ್ಲೋ ನಿರ್ಮಲ ?

**ತಿಂಮ**

ಹಿಂದೆ ಬರತಾ ಇದ್ಲಮ್ಮ....ಅಗೋ ಬಂದಳು ನೋಡು.

**ಪದ್ಮಮ್ಮ**

ಏ, ನಿರ್ಮಲಾ-

**ನಿರ್ಮಲ**

ಬಂದೆನಮ್ಮಾ—

**ಪದ್ಮಮ್ಮ**

ಏನು ಬಂದೆನೇ, ಇನ್ನೂ ಹೀಗೇ ಇದ್ದೀಯಲ್ಲ ? ನೀನೇನು ತ್ವಾಟಕ್ಕೆ ಬರೋ ಆಕಿ ಹೌದೊ ಅಲ್ಲೋ ?

**ಪ್ರತಾಪರಾಯರು**

ಯಾವ ತ್ವಾಟಕ್ಕೆ ಹೋಗ್ತೀರಿ ನೀವು ?

**ಪದ್ಮಮ್ಮ**

ಇನ್ಯಾವ ತ್ವಾಟ, ನಮ್ಮಪ್ಪನದೂ. ಆಗಲೆ ಮರೆತುಬಿಟ್ರೇನು ? ನೀವೂನು ಕೂತಿದ್ರೆಲ್ಲ ನಿಮ್ಮಮ್ಮನ ಮಾತು ಕೇಳಿ ಮೂರು ತಿಂಗಳು ಮೂಲಿ ಹಿಡಿದು. ಊರ ಮುಂದಿನ ತೆಂಗಿನ ತ್ವಾಟ ನನ್ನ ಹೆಸರಿಲೆ ಬರಕೊಡೋ ತನಕ....

**ಪ್ರತಾಪರಾಯರು**

ನನ್ನ ಹೆಸರಿಲೆ ?

**ಪದ್ದಮ್ಮ**

ನನ್ನ ಹೆಸರಿಲೆ ಅಂದ್ರೆ ನಿಮ್ಮ ಹೆಸರಿಲೆ ಅಲ್ಲ. ಆ ತ್ವಾಟಾನ್ನ ಪದ್ದಿ ಹೆಸರಿಲೆ ಬರಕೊಡದಿದ್ರೆ ನಾನು ಮಗನ್ನ ಮನಿ ಅಳಿತನಾಕ್ಕೇ ಕಳಿಸೋದಿಲ್ಲ ಅಂತ ಸವಾಲು ಹಾಕಿದ್ರಲ್ಲ ನಿಮ್ಮಮ್ಮ ? ಮರತಿರೇನು, ಇಷ್ಟು ಲಗೂನ ?

**ತಿಂಮ**

ಹಾಗಾದರೆ ನಿನ್ನ ಮನ್ಯಾಗೆ ಇದ್ದರೇನಮ್ಮ, ಅಪ್ಪ ?

**ಪ್ರತಾಪರಾಯರು**

ಮುಚ್ಕೋ ಬಾಯಿ, ಅಧಿಕಪ್ರಸಂಗಿ. ಇಲ್ಲದಿದ್ದರೆ ನೀನೆಲ್ಲಿ....

**ಪದ್ದಮ್ಮ**

ಇರಲಿ ಬಿಡ್ರಿ, ಅಷ್ಟಯಾಕೆ ಗದರಿಕೋತೀರಿ ಹುಡಗನ್ನ— ಆದೇನೊ ಅಂತಾರಲ್ಲ ಆ ಇಚಾರ. ನೀವೇನು ಕಡಿಮಿ ಮಾಡಿದಿರಾ ನಿಮ್ಮ ಕಾಲಕ್ಕೆ....

**ನಿರ್ಮಲ**

ಹೋಗಲಿ ಬಿಡಮ್ಮಾ, ಅದನ್ನೆಲ್ಲ ತೊಗೊಂಡು ಈಗೇನು ಮಾಡೋದದೆ ? ಹಳೆ ಪುರಾಣಾನೆಲ್ಲ....

**ಪದ್ದಮ್ಮ**

(**ಅಕ್ಕಸದಿಂದ**) ಹೌದೇ ಹೌದು, ನಾನು ಎಂದೋ ಅಂದೀನಿ ಈ ಮಾತು. ಎಷ್ಟಾದರೂ ನೀವು-ತಂದೀ-ಮಗಳೂ-ಒಂದೇ. ನಾನೊಬ್ಬಾಕೇ ಹೊರಗೆ ನೋಡು. ನಿಮ್ಮಪ್ಪನ ಮಾತು ಕೇಳಿ ನೀನೂ ಕುಣಿದೆಲ್ಲ, ಆಗೆಲ್ಲ— ಕೊಡಿಸಿಬಿಡಮ್ಮಾ ಹೋಗಲಿ ಒಂದು ಮೋಟಾರಸೈಕಲ್ಲು, ಅದೇನು ಮಹಾ— ಅಂತ.

**ತಿಂಮ**

ಹೌದು ಬಿಡಮ್ಮಾ, ನೀನು ಮಾಮಾಗೆ ಮೋಟಾರಸೈಕಲ್ಲು ಕೊಡಿಸಿದ್ರೆ ನಾನು ಹಿಂದೆ ಕೂತುಗೊಂಡು ಫಟ್ ಫಟ್ ಅಂತಾ ತಿರಗತಿದ್ದೆ.

**ಪ್ರತಾಪರಾಯರು**

ಏ ತಿಂಮಾ—

**ತಿಂಮ**

ಏನಪ್ಪಾ ?

**ಪ್ರತಾಪರಾಯರು**

ನಾನೆಲ್ಲ ನಿನಗೆ ಮೋಟಾರ ಸೈಕಲ್ಲಿನ ಹಿಂದಿನ ಸೀಟೊಂದೇ ತಂದು ಕೊಡ್ತೀನಿ ಸುಮ್ಮನಿರೋ.

**ಪದ್ದಮ್ಮ**

ಹೀಗೇ ಹಾಳು ಹರಟೇ ಒಳಗೇ ಕಾಲಕಳೀತೀರೋ, ಇಲ್ಲಾ ಲಗೂನ ಹೋಗಿ ರಾಮಸ್ವಾಮಿ ಅವರ ಕಾರು ಕಳಸ್ತೀರೋ ?

**ಪ್ರತಾಪರಾಯರು**

ಹೌದು ನೋಡು, ಮಾತಿನಾಗೆ ಕೂತುಬಿಟ್ಟೆ ನಾನೂನು. ಫೋಟೋದ್ದು ಮರತೇಹೋತು. ಕಾರು ಎಷ್ಟು ಹೊತ್ತಿಗೆ ಬರಬೇಕು ಅಂದಿ ನೀನು ?

**ಪದ್ದಮ್ಮ**

ಆರು ಘಂಟೇಗೆ ಕಳಿಸಿದರೆ ಸಾಕು. ಒಂದು ತಾಸು ನಮ್ಮ ಅಪ್ಪನ ತ್ವಾಟದಾಗೆ ತಿರಿಗಾಡಿ ಎಳೆನೀರು ಕುಡುದು ಬ್ಯಾಸರನಾದರೂ ಕಳಕೊಂಡು ಬರ್ತೀನಿ ಹೋಗಿ. ( ನಿರ್ಮಲಳನ್ನು ಕುರಿತು ) ಏ, ನಿರ್ಮೂಲಿ.

**ನಿರ್ಮಲ**

ಏನಮ್ಮಾ ?

**ಪದ್ದಮ್ಮ**

ಹೀಗೇ ಬರ್ತೀದೇನು, ಈ ಕರೀಮಾರಿ ಸೀರಿ ಉಟುಗೊಂಡು, ಕೆದರಿದ ತಲಿ ಇಟುಗೊಂಡು ? ಒಂದಿಷ್ಟು ಛಂದಾಗು ನಮ್ಮವ್ವ, ನೋಡಲಾರೆ ನಿನ್ನ ರೂಪಾನ. ಹ್ಯಾಗಿದ್ದಾಳೆ ನೋಡು ಮಾರಿವ್ವ, ಹೆಳ್ಳೇ ಕಳ್ಳೇ....

**ನಿರ್ಮಲ**

ಆ ಜಾರ್ಜೆಟ್ ಸೀರಿ ಉಟುಗೊಳ್ಳೇನಮ್ಮಾ ?

**ಪದ್ದಮ್ಮ**

( ಕೋಪದಿಂದ ) ಉಟುಗೊ ಜಾರ್ಜೆಟ್ ಸೀರಿ, ಇಲ್ಲಾ ಪೀತಾಂಬರ ಉಟುಗೋ. ಬರ್ತಾನ ಅಲ್ಲೆ ನಿನಗಂಡ ಆ ಗುಕ್ಕರಾಯ, ನಿನ್ನ ಸಿಂಗಾರ ನೋಡ್ಲಿಕ್ಕೆ.

**ತಿಂಮು**

ತ್ವಾಟಕ್ಕೆ ಮಾವು ಬರ್ರಾನೇನಮ್ಮಾ ?

**ಪ್ರತಾಪರಾಯರು**

ಮುಚ್ಕೊ ಬಾಯಿ, ನಿನೂ ಹೀಗೆ ಹೋಗ್ತಿಯೇನು ನಿನ್ನ ತಾತನ ತ್ವಾಟಕ್ಕೆ. ಹಮಾಲನ ಮಗ ಇದ್ದಾಗೆ ಇದ್ದೀಯಲ್ಲೊ ! ಆ ಹೊಸ ಬುಶ್ ಕೋಟು ತೊಟಕೊ, ಹುಲಿಹಸರು ಬಣ್ಣದ್ದು. ಅಲ್ಲೇ....

**ಪದ್ದಮ್ಮ**

ಏನದು ?

**ಪ್ರತಾಪರಾಯರು**

ಏನೂ ಇಲ್ಲಾ....ನೀನು....ನೀನೂನು....ಹೀಗೇ ಹೋಗ್ತಿಯೇನು, ನನ್ನ ಮಾವನವರ ತ್ವಾಟಕ್ಕೆ ?

**ಪದ್ದಮ್ಮ**

ಸಾಕು ಹೋಗರಿ,ಹುಚ್ಚು ಹುಚ್ಚು ಬಡಿಬ್ಯಾಡ್ರಿ ಹುಡುಗರ ಎದುರಿಗೆ. ಹೋಗು ನಡಿರಿ, ತೊಗೊಳ್ರಿ ಬೀಗದ ಕೈ ಬೇಕಂದ್ರೆಲ್ಲ.

**ಪ್ರತಾಪರಾಯರು**

ಅಲ್ಲಾ, ನೀನು....ಆ....ಧರ್ಮಾವರದ ಸೀರಿ....

**ಪದ್ದಮ್ಮ**

ಇರಲಿ ಹೋಗ್ರಿ, ನಿಂತ್ರಿ ಹೌದಲ್ಲೊ ಬಾಯಿತಕ್ಕೊಂಡು ಮತ್ತೆ ಮಾತಿಗೆ ?

**ಪ್ರತಾಪರಾಯರು**

ಇಕೊ ಹೊರಟೆ ಮಾರಾಯಳೆ. ನೀವು ತ್ವಾಟದಿಂದ ಬರೊಹೊತ್ತಿಗೆ ಮನ್ಯಾಗ ಬಂದು ಕೂತುಬಿಡ್ತೀನಿ. ಆಗ ಸತ್ತೇವ ತಾನೇ ತಿಳಿತದೆ,ನೀನು ಹ್ಯಾಗೆ ಹೋಗಿದ್ದಿ ತ್ವಾಟಕ್ಕೆ ಅಂಬೋದು ( ಹೋಗುವರು )

**ಪದ್ದಮ್ಮ**

( ಅವಸರಪಡಿಸುವ ದನಿಯಲ್ಲಿ ) ತಿಂಮಾ, ನಿಮ್ಮಲಾ, ಏಳ್ರಿ ಏಳ್ರಿ. ಇನ್ನ ಕೂಡಬಾಡ್ರಿ ಮೂಲಿ ಮೂಲಿ ಹಿಡಿದು. ಭಡಾ ಭಡಾ ಏಳ್ರಿ

ಮೋಟಾರು ಬರೋದರೊಳಗೆ. ಒಂದಿಷ್ಟು ಮಾರಿ ಮುಸುಡಿ ಮುಗಿಸಿ, ಬಟ್ಟೆ ಬರಿ ತೊಟಗೊಂಡ ಸಿದ್ಧಾಗರಿ. ನಾನೂ ಎರಡು ಕಾಲು ಹೆರಳು ಮುದುರಿ ಕೋತೀನಿ. ಕನ್ನಡಿ ಎಲ್ಲಿ ಅದೇ....ಅಯ್ಯ ನಮ್ಮವ್ವ ! ಹ್ಯಾಗಿದ್ದೀನಲ್ಲ ನಾನು, ಸಣ್ಣ ಮಕ್ಕಳು ನೋಡಿ ಚಿಟಿಚಿಟಿ ಚೀರೋ ಹಾಗೆ.

೨

(ತಿಂಮನ ಅಮ್ಮನ ಅಪ್ಪನ ತೋಟ ಮುಂದು ಮುಂದು ತಿಂನು ಸಿರ್ಮಲ, ಹಿಂದೆ ಹಿಂದೆ ಪದ್ದಮ್ಮ ಮೆಲ್ಲನೆ ಹೊರಟಿದ್ದಾರೆ. ಅಲ್ಲೆ ಇಲ್ಲೆ ತಿರುಗಿ ಮಧ್ಯೆ ಇರುವ ಬಂಗಲೆಯ ಬಳಿ ತಿಂಮ ಒಬ್ಬನೇ ಓಡಿ ಬರುತ್ತಾನೆ. ಬಾಗಿಲ ಬಳಿ ಒಂದು ಮೋಟಾರ ಸೈಕಲ್ಲು ಕಟ್ಟು ನಿಂತಿದೆ. ಅದರ ಬಳಿ ಓಡುತ್ತ ಬಂದವನೆ ತಿಂಮ ಹಾರನ್ನು ಮಾಡುತ್ತಾನೆ. ಒಳಗಿನಿಂದ ಹೊಸಬ ಓಡಿಬಂದು...)

**ಹೊಸಬ**

(ಕಿರುನಗೆಯಿಂದ) ಪ ಪ, ಯಾ ಯಾ ಯಾರು ಸ್ನೀ........

**ತಿಂಮ**

ನಾನು ಮಾಮಾ ತಿಂಮ. ನಿಂದೇನು ಮಾಮಾ ಈ ಮೋಟಾರಸೈಕಲ್ಲು

**ಹೊಸಬ**

ಹೌ ಹೌ ಹೌದು.

**ತಿಂಮ**

ಯಾರು ಕೊಡಿಸಿದರು ಮಾಮಾ? ನನಗೆ ಈ ಹಿಂದಿನ ಸೀಟು ಕೊಡು ಮಾಮಾ. ಮೂರು ಘಾಲಿ ಮೋಟಾರ ಸೈಕಲ್ಲು ಇರ್‍ತಾವೇನು ಮಾಮಾ? ನೀನು ಕೈಯಿಕಾಲು ನಾಲ್ಕೂ ಬಿಟ್ಟು ನಡಸ್ತೀದೇನು ಮಾಮಾ? ಇದರ ಮ್ಯಾಲಿಂದ ನೀನು ಎಂದಾದರೂ ಬಿದ್ದೀದೇನು ಮಾಮಾ? ಮೊಟಾರ ಸೈಕಲ್ಲು ಕಂಡರೆ ಆಕಳಿಗೆ ಯಾಕೆ ಮಾಮಾ ಅಷ್ಟು ಸಿಟ್ಟು? ಇದು ನೀರಾಗೆ ನಡೀತದೇನು ಮಾಮಾ? ನಿನಗೆ ಏರಲಿಕ್ಕೆ ಬರ್‍ತದೇನು ಮಾಮಾ?

**ಹೊಸಬ**

ಬ್ಬಬ್ಬಬ್ಬಬರತದೊ ತಿಂಮ. ಏರಿಬ್ಬಬ್ಬಬ್ಬಂದದ್ದಕ್ಕೇ ಇಇಇಲ್ಲಿ ಕೆಟ್ಟು ನಿಂತಿತು ನ್ನೋನ್ನೋನ್ನೋಡು, ಈ ತೋತೋತೋಟದ ಮುಂದೆ. ಯಾರದೊ ತಿಂಮಾ, ಈ ತ್ತೋತ್ತೋತ್ತೋತ್ತೋತ್ತೋಟ?

**ತಿಂಮ**

ನಮ್ಮ ಅಪ್ಪನ ಅಮ್ಮನದಂತೆ ಮಾಮಾ, ಈ ತ್ವಾಟ. ಅಲ್ಲಾ, ನಮ್ಮ ಅಮ್ಮನ ಅಪ್ಪನದಂತೆ. ನಮ್ಮ ಅಮ್ಮನ ಮದುವಿ ಆದವ್ಯಾಲೆ, ನಿಮ್ಮ ಅಮ್ಮನ ಅಪ್ಪ..ಅಲ್ಲಾ....ನಮ್ಮ ಅಪ್ಪನ ಅಮ್ಮಾ,....ಅಲ್ಲಾ ಅಲ್ಲಾ....ನಮ್ಮ ಅಪ್ಪನ ಅಮ್ಮ........

**ಪದ್ಮಮ್ಮ**

(ಪ್ರವೇಶಿಸಿ ಕೋಪದಿಂದ) ಏ ತಿಂಮಾ !

**ತಿಂಮ**

(ಆನಂದದಿಂದ) ಮಾಮ ಬಂದಾನಮ್ಮಾ, ಮಾಮ........

**ಪದ್ಮಮ್ಮ**

ಯಾವ ಮಾಮನೋ, ಕಂಡವರಿಗೆಲ್ಲ ಮಾಮ ಅಂತೀದೆಲ್ಲ ?

**ತಿಂಮ**

ಮೋಟಾರಸ್ಯೆಕಲ್ಲಮಾಮ ಅಮ್ಮಾ, ಇಗೋ ನೋಡು (ಹಾರನ್ನು ಬಾರಿಸುವನು)

**ಪದ್ಮಮ್ಮ**

(ನಿರ್ಮಲಾಳ ಕಿವಿಯಲ್ಲಿ) ನನಗೂ ಗುರುತೇ ಹತ್ತಲಿಲ್ಲಲ್ಲೆ, ಆಗಲೆ ಏಳು ವರುಷ ಆತು ಮಾರಾಯಳೆ ಅವರನ್ನ ನೋಡಿ.

**ಹೊಸಬ**

(ತಪ್ಪಿತಸಂತೆ) ನೀ ನೀ ನೀವೂ....ತಾ ತಾ ತಾವೂ....ಏನೂ ತ್ರಿತ್ರಿತ್ರಿಳಕೋ ಬ್ಯಾರದು. ನಾನೂ ಮೋ ಮೋಟಾರ ಸ್ಯೆಕಲ್ಲೂಲ್ಲೂಲ್ಲೂ....

**ಪದ್ಮಮ್ಮ**

(ಮೆಲುದನಿಯಲ್ಲಿ) ಗುಕ್ಕೋದು ಮದಲಗಿಂತ ಹೆಚ್ಚಾಗೆದಲ್ಲ ನಿರ್ಮಲ ನಿನ ಗಂಡಗೆ ? ಎಷ್ಟು ಸೊರಗ್ಯಾರೇ ಪಾಪ !

**ನಿರ್ಮಲ**

(ನಾಚಿಕೆ) ಇರಲಿ ಹೋಗಮ್ಮ ಸಾಕು, ನೀನಂತೂ....

**ಪದ್ಮಮ್ಮ**

ಅಲ್ಲೇ ಮದುವ್ಯಾಗೆ ಎಷ್ಟು ಗುಂಡುಗುಂಡು ಇದ್ರು ಗುಂಡಕಲ್ಲಿನ ಹಾಗೆ....

**ನಿರ್ಮಲ**

ಸಾಕು ಬಿಡಮ್ಮ. ನೀನಂತೂ, ದೇವರು ಕೊಟ್ಟ ಮ್ಯಾಗ ಯಾರೇನು ಮಾಡ್ತಾರೆ.

**ಪದ್ಮಮ್ಮ**

ವ್ಯಸನ ಅಂಬೋದು ಭಾಳ ಕೆಟ್ಟದು ನೋಡು, ಯಾರಿಗಾದರು. ಸೊರಗಿ ಖಡ್ಡಿ ಆಗಿ ಖಂಡೇರಾಯ ಆಗ್ಯಾರೆ, ಪಾಪ !

**ಹೊಸಬ**

ಈ ಹಾ ಹಾ ಹಾಳು.... ಮೋಟಾಾರ ಸೈಸೈಕಲ್ಲೂಊ........

**ಪದ್ಮಮ್ಮ**

ಆತು ಬಿಡ್ರಿ, ಈ ಮೊಟಾರಸೈಕಲ್ಲ ಕತಿ ಈಗ ಬ್ಯಾಡ. ಆದ್ದಾತು, ನೀವೂನು ಬ್ಯಾರೆ ತಿಳಕೋಬ್ಯಾಡ್ರಿ.

**ಹೊಸಬ**

ತ್ರಿತ್ರಿಳಕೊಳ್ಳಿಕ್ಕೆ ಏಏನದೆ... ಈ ಮೋಮ್ಮೋಮ್ಮೋಟಾರ ಸೆಕಲ್ಲಿಂದ....

**ಪದ್ಮಮ್ಮ**

ಅದೇ, ಅದೇ ನಾನಂಬೋದೂನು. ಈ ಮೋಟಾರ ಸೈಕಲ್ಲಿಂದಾನೆ....

**ನಿರ್ಮಲ**

(ತಾಯಿಯ ಕಿವಿಯಲ್ಲಿ) ಮನೀಗೆ ಬಾ ಅನ್ನಮ್ಮ ಅವರನ್ನ.

**ಪದ್ಮಮ್ಮ**

ಹೇಳ್ತೀನಿ ಹೇಳ್ತೀನಿ, ಎಷ್ಟು ಅವಸರಮ್ಮ ನಿನಗೆ ? ಆದ್ದು ಆತು, ಇಲ್ಲಿ ಅಡಿವ್ಯಾಗೆ ಇರೋದು ಸರಿ ಅಲ್ಲ....ಯಾಕಂದ್ರ.... ಇದು ಸರಿ ಅಲ್ಲ.... ಅದಕೆ.... ಮನೀಗೆ ಬರ್ರಿ....ಯಾಕಂದ್ರೆ....

**ಹೊಸಬ**

ಛೆ ಛೆ ! ನ್ನಾನ್ನಾನ್ನಾನು....

**ತಿಮ್ಮು**

ಬಾ ಮಾಮ, ಮನಿಗೆ ಹೋಗೋಣ.

**ನಿರ್ಮಲ**

(ತಿಂಮನ ಕಿವಿಯಲ್ಲಿ) ಬಿಡಬ್ಯಾಡೋ ತಿಂಮ ಅವರನ್ನ, ಮನೀಗೆ ಬರೋ ತನಕ.

**ತಿಂಮ**

ನಡಿ ಮಾಮ ಹೋಗೋಣ ನಮ್ಮ ಮನಿಗೆ.

**ಹೊಸಬ**

ಅಅಲ್ಲೊ ತ್ತಿಂಮಾ........

**ತಿಂಮ**

ಅಲ್ಲ ಇಲ್ಲ ಪಲ್ಲ ಇಲ್ಲ. ನಡಿ ಮಾಮಾ ನಮ್ಮ ಮನಿಗೆ. ನಮ್ಮ ಮನ್ಯಾಗೆ ರೇಡಿಯೊ ಅದೆ ಮಾಮ, ಅಪ್ಪಂದೂ....ಅಲ್ಲಾ....ಅಮ್ಮಂದೂ. ಸಂಗೀತ ಕೇಳ ವಂತಿ ನಿನ್ನ ಮ್ಯಾಗೆ ಆದರೆ.

**ಪದ್ಮಮ್ಮ**

ನಮ್ಮ ಮನೀ ಅವರಿ ಬಂದು ಕರೀಬೇಕು ಅಂತ ಹೌದಲ್ಲೊ, ನಿಮ್ಮ....

**ಹೊಸಬ**

ಛೇ ಛೇ....ಅಲ್ಲಾ....ನ್ನಾನ್ನಾನೂ....

**ಪದ್ಮಮ್ಮ**

ಇಲ್ಲಿ ಇರೋದು ಒಳ್ಳೆದಲ್ಲ. ಯಾಕಂದ್ರೆ....

**ತಿಂಮ**

ಎಲ್ಲ ಎಳೆನೀರುಗಾಯಿ ನಿಮ್ಮ ಪಾಲೇ ಆಗ್ತಾವೆ.

**ನಿರ್ಮಲ**

ಏ ತಿಂಮ, ಮುಚ್ಕೊ ಬಾಯಿ.

**ಪದ್ಮಮ್ಮ**

ಅವಂದು ಏನು ಬಿಡ್ರಿ, ಅವನು ಹಾಗೆ ಅವನು. ಅವನ ತಲೀನೆ ವಿಚಿತ್ರ ಅದೆ. ಆದ್ದು ಆತು, ಅನಾಯಸ ಬಂದೀರಿ....ಮನ್ಯಾಗೆ ದೀಪಾವಳಿ ಹಬ್ಬಾನೂ ಮಾಡ್ತೀವಿ....

**ಹೊಸಬ**

ಅಅಲ್ಲಾ....ನಾನು....ಮೋಟಾರ ಸೈ ಸೈ ಸೈ ಸೈ ಸೈ ಕಲ್ಲೂ....

**ಪದ್ದಮ್ಮ**

ಇಲ್ಲೆ ವಳಗಿತ್ರಿ, ಕಟ್ಟೇಮ್ಯಾಲೆ. ಕಾರಿನಾಗೆ....

**ತಿಂಮು**

ನೀನು ಕಾರಿನಾಗೆ ಹೋಗು ಮಾಮಾ, ನಾನೆಲ್ಲ ಮನಿಗೆ ತರ್ತೀನಿ ಮೋಟಾರ ಸೈಕಲ್ಲು ಏರಿಕೊಂಡು. ಇದಕ್ಕೆ ಹ್ಯಾಗೂ ಹಿಂದಿನ ಸೀಟು ಅದೆ.

**ನಿರ್ಮಲ**

ಸುಮ್ಮನೆ ಬಾ ತಿಂಮಾ, ನಮ್ಮ ಜತೀಲಿ. ಕೈ ಕಾಲು ಮುರಕೊ ಬ್ಯಾಡ ಹಬ್ಬದ ಮುಂದೆ.

**ಪದ್ದಮ್ಮ**

ಪೂರ್ತಿ ಕತ್ತಲಾತು, ಹೋಗೋಣ ನಡಿರಿ ಮನಿಗೆ. ಹೊರಗೆ ಕಾರು ನಿಂತಿದೆ.

**ಹೊಸಬ**

ನೀವು ಹೊಹೋಗ್ರಿ. ನ್ನಾನ್ನಾನು ತೀತೀತೀ ತಿಂಮಾ....

**ತಿಂಮು**

ಓಹೊ ! ನನಗೆ ಗೊತ್ತು ಮಾಮಾ ಮನಿ ಹಾದಿ.

**ಪದ್ದಮ್ಮ**

( ಪದ್ದಮ್ಮ ನಿರ್ಮಲಳನ್ನು ಕುರಿತು ಮೆಲುದನಿಯಲ್ಲಿ ) ಇಲ್ಲಾ, ನೀವಿಬ್ಬರೇ ಆಮ್ಯಾಲೆ ಬರ್ತೀರೇನಮ್ಮಾ, ನಾನು ಹೋಗ್ತೀನಿ ತಿಂಮ್ಮನ್ನ ಕರಕೊಂಡು ?

**ನಿರ್ಮಲ**

( ನಾಚಿಕೆ ) ಸಾಕು ಹೋಗಮ್ಮ, ನೀನಂತೂ. ನಾವು ಮನಿಗೆ ಹೋಗಿ ಅಪ್ಪನ್ನ ಕಳಿಸೋಣ. ಅವರು, ತಿಂಮು ಇಲ್ಲೆ ಇರ್ಲಿ ಅನಕಾ.

**ಪದ್ದಮ್ಮ**

ತಿಂಮಾ, ನೀನೂ ಇಲ್ಲೇ ಇರು ಅವರ ಜೊತೀಲೆ. ಈಗ ಅವರೇ— ನಿಮ್ಮ ಅಪ್ಪನೇ—ಬರತಾರೆ ಮೋಟಾರು ತೊಗೊಂಡು.

**ಹೊಸಬ**

ನಾ ನ್ನಾ ನ್ನಾನೂ....

**ಪದ್ದಮ್ಮ**

ಇಲ್ಲ ಇಲ್ಲ, ಈಗ ಅವರೇ ಬರ್ತಾರೆ.

( ಪದ್ದಮ್ಮ ಮತ್ತು ನಿರ್ಮಲ ಕಾರಿನಲ್ಲಿ ಹೊಡುವರು )

**ಹೊಸಬ**

ನಿಮ್ಮ ಮಮಮ್ಮನಿ ಎಲ್ಲಿ....

**ತಿಂಮ**

ನರಸಿಂಹ ದೇವರ ಗುಡಿ ಅದೆ ನೋಡು ಮಾಮಾ, ಅದರ ಬಲಗಡೀನೆ ಅದೆ ನಮ್ಮ ಮನಿ.

**ಹೊಸಬ**

ನರಸಿಂ ದ್ದೇ ದೇವರು ಗುಗ್ಗುಗ್ಗುಡಿ ಎಲ್ಲೆ ?....

**ತಿಂಮ**

ನರಸಿಂಹ ದೇವರ ಗುಡಿ ಗೊತ್ತಿಲ್ಲೇನು ಮಾಮಾ ? ನಮ್ಮ ಮನಿ ಅದೆ ನೋಡು, ಅದರ ಎಡಗಡೀನೆ ಅದೆ ಮಾಮಾ, ನರಸಿಂಹ ದೇವರ ಗುಡಿ.

**ಹೊಸಬ**

ಏಏಏಏಏನೋ ತ್ತಿತ್ತಿತ್ತಿ....

**ತಿಂಮ**

ನಿನಗಿನ್ನೂ ತಿಳಿಲಿಲ್ಲೇನು ಮಾಮಾ ? ನರಸಿಂಹದೇವರು ಇದ್ದಾನೆ ನೋಡು, ಅದೇ ನರಸಿಂಹ ದೇವರ ಗುಡಿ. ನಾವಿರೋದೆ ನಮ್ಮ ಮನಿ.

**ಹೊಸಬ**

ಭಾಳಾ ಶಾಶಾಶಾಣ್ಯಾ ಇದ್ದೀ ಜ್ಬಿಜ್ಬಿಡು. ಯಾರಾರು ಇಇದ್ದಾರೋ ನಿನಿ....

**ತಿಂಮ**

ನಮ್ಮನ್ಯಾಗೇನು ಮಾಮಾ ? ಎಲ್ಲಾರೂ ಇದ್ದಾರೆ ಮಾಮಾ. ನಾನು, ನಮ್ಮಮ್ಮ ನಮ್ಮಪ್ಪ, ನಮ್ಮಕ್ಕ....

**ಹೊಸಬ**

ನಿಮ್ಮ ಅಕ್ಕ ಕ್ಕಕ್ಕನ ಗಗಗ

**ತಿಂಮ**

ಇದ್ದಾರೆ. ನಾನು ನೋಡೇ ಇಲ್ಲ ಮಾಮಾ ಅವರ್ನ.

( ಮೋಟಾರ ಹಾರನ್ನು ಕೇಳಿ ಬರುವದು )

ನೋಡು ಮಾಮಾ ಕಾರು ಬಂತೂ, ಹೋಗೋಣ ನಡಿ.

### ಡ್ರೈವರ

ಓ, ತಿಂಮಾ ಮಾರಾಜ್

### ತಿಂಮು

ನಮ್ಮ ಅಪ್ಪ ಬರಲಿಲ್ಲೇನೊ ?

### ಡ್ರೈವರ

ನಿಂದೂ ಅಪ್ಪಾ ಎಲ್ಲಿಗೊ ಹೊರಾಕೆ ಹೋಗೇತಂತೆ. ಅದಕೇ ಅವ್ವಾ ಹೇಳಿದರೂ ಆ ಸಾಮಿನ್ನ ತಗಂಡು ನೀನು ಜಲ್ದೀ....

### ತಿಂಮು

ಬಾ, ಮಾಮಾ.

( ಕಾರು ಹಾರನ್ನಿ ಸುತ್ತ ಭುರ್ರ್ರ ಸುವದು )

೩

( ರೈಲ್ವೆ ನಿಲ್ದಾಣದಲ್ಲಿ. ಪ್ರತಾಪರಾಯರು ಮಾಮೂಲಾಗಿ ತಡವಾಗಿ ಬರುವ ಗಾಡಿಗಾಗಿ ಕಾಯುತ್ತ 'ಇಲ್ಲಿ ಉಗಳಬಾರದು' ಎಂಬ ಬೋರ್ಡಿನ ಬುಡದಲ್ಲಿ ನಿಂತಿದ್ದಾರೆ. )

### ಪ್ರತಾಪರಾಯರು

( ಮನಸ್ಸಿನಲ್ಲಿಯೇ ಗಟ್ಟಿಯಾಗಿ ) ಮನ್ಯಾಗೆ ಹೇಳಿ ಆದರೂ ಬರಲಿಲ್ಲ ನಾನು....ಹೌದು, ಯಾರಿಗೆ ಹೇಳಬೇಕಿತ್ತು ? ಒಬ್ರೂ ಇಲ್ಲ, ಎಲ್ಲಾರೂ ತ್ವಾಟಕ್ಕೆ ಹೋಗಿದ್ರಲ್ಲ....ಟೆಲಿಗ್ರಾಂ ನೋಡಿದೆ. ಓಡಿಬಂದು ಬಿಟ್ಟೆ....ಇದೇನು ಆಶ್ಚರ್ಯ ಅನಬೇಕು ? ಏಳು ವರ್ಷದಿಂದ ಇಲ್ಲದ ಪುಣ್ಯ ಇವತ್ತು ಬಂತು ! ಯಾವ ದೇವರು ರಘುಪತಿರಾಯಗೆ ಒಳ್ಳೆ ಬುದ್ಧಿ ಕೊಟ್ಟನೋ ಅಂತೀನಿ. ಏನು ಬರದಾನೆ ತಾರಿನಾಗೆ....ನನಗೆ ಪಶ್ಚಾತ್ತಾಪ ಆಗ್ಯದೆ, ಕ್ಷಮಿಸ್ರಿ. ರಾತ್ರಿ ಗಾಡೀಗೆ ಬರ್ತೀನಿ. ಇಷ್ಟೇ, ಮೂರೇ ಮಾತು ! ಏನಾರೆ ಆಗಲಿ, ನನ್ನ ಮಗಳ ಬಾಳಿವಿ ಸರಿ ಆತು ಸಾಕು.....ಈಗ ಹ್ಯಾಗಿದ್ದಾನೊ, ಆ ರಘುಪತಿ ರಾಯ ಅಂತೀನಿ. ಏಳುವರ್ಷ ಆತು ನಾ ನೋಡಿ. ಏನು ವಿಪರೀತ ಧಪ್ಪೆ ಆಗ್ಯಾನೊ, ಇಲ್ಲಾ ಸೊರಗಿ ಖಡ್ಡೀನೆ ಆಗ್ಯಾನೊ....ಹೌದು, ನನಗೆ ಆತನ ಗುರುತೇ ಹತ್ತದಿದ್ರೆ ?....ಮದಲು ಈ ಗಾಡಿ ಅಂತೂ ಬರಲಿ, ಇವತ್ತಿನೊಳಗೆ.

( ಗಾಡಿ ಬರುವದು. ಗಜಿಬಿಜಿ, ಗಲಾಟೆ, ಗೌಜು. ಜನರ ಗುಂಪಿನಿಂದ ಓಡುತ್ತ ಬಂದು ರಘುಪತಿರಾಯರು ಪ್ರತಾಪರಾಯರಿಗೆ ನಮಸ್ಕರಿಸುವರು. )

ಛೆ ಛೆ ! ಏಳ್ರಿ ಏಳ್ರಿ, ನೀವು ನಮಸ್ಕಾರ ಮಾಡಬಾರದು. ನೀವು ಎಷ್ಟಂದ್ರು ಆಚಾರ್ರು, ರಾಯರು ಅಂತ ಕರದು ಕೊಂಡ್ರೂನು. ಛಂದಾಗಿದ್ದಾರೇನು ಸುಬ್ಬಣಾಚಾರ್ರು, ಸಾವಿತ್ರೆಮ್ಮ ?

### ರಘುಪತಿರಾಯರು

ಅವರಿಗೇ ನಾನಾನಾಗೇದ ಧಾದ್ಧಾದ್ಧಾಡಿ. ನ್ನಾನ್ನಾನ್ನಾನು ಬ್ಯಾಬ್ಯಾರೆ....

### ಪ್ರತಾಪರಾಯರು

ಮನೀಗೆ ಹೋಗೋಣ ನಡಿರಿ ಮದಲು. ನಿಮ್ಮ ತಾರೂ ಬಂತೂ, ಒಬ್ಬ ಗೆಳೆಯನ ಕಾರೂ ಸಿಕ್ತು ಅನಾಯಸ. ಒಳ್ಳೆ ಕೆಲಸ ಮಾಡಿದಿರಿ, ದೀಪಾವಳಿ ಅಂದ್ರೆ ಈಗ ನಿಜವಾದ ದೀಪಾವಳಿ ನಮ್ಮ ಮನ್ಯಾಗೆ.

(ಕಾರು ಹೊರಡುವದು. ರಾಯರ ಮನೆಯ ಮುಂದೆ ಎರಡೂ ಕಾರುಗಳು ಒಮ್ಮೆಲೆ ಬಂದು ನಿಲ್ಲುವವು.)

### ತಿಂಮು

(ಕಾರಿನಲ್ಲಿಂದಲೇ) ಅಪ್ಪಾ, ಅಪ್ಪಾ, ಮೋಟಾರಸೈಕಲ್ಲ ಮಾಮು ಬಂದಾರಪಾ.

### ಪ್ರತಾಪರಾಯರು

(ಕಾರಿನಲ್ಲಿಂದಲೆ) ಇಲ್ಲಿ ನೋಡೊ ತಿಂಮ್ಯಾ,ಮಾಮು ಬಂದಾರೆ, ಮಾಮು. ಕರಿಯೊ ನಿನ್ನ ಅಮ್ಮನ್ನ, ನಿರ್ಮಲಾನ್ನ. ಕದಲಾರತಿ ತರಲಿ ಲಗೂನ.

### ತಿಂಮು

ಅಮ್ಮಾ , ಏ ಅಮ್ಮಾ , ಏ ಅಕ್ಕಾ !

### ಪದ್ದಮ್ಮ

(ಗಡಿಬಿಡಿಯಲ್ಲಿ) ಬಂದೆ ಬಂದೆ. ಏ ನಿರ್ಮಲಾ, ಇನ್ನೂ ಏನು ಸೌರಸ್ತೀದಿ ಅಲ್ಲೆ ? ಮದಲು ಕದಲಾರತಿ ತೊಗೋ, ಏಳು ವರ್ಷದ ಮ್ಯಾಲೆ ಬಂದಾರೆ ಬಾಗಿಲಿಗೆ ಅಳಿಯಾದೇವರು. ಹೂಂ....ತೊಗೊಂಡು ಬಾ.... (ಆಶ್ಚರ್ಯ !) ಐ, ಇದೇನು ! ಎರಡು ಬಂದಾವಲ್ಲ, ಮೋಟಾರುಗಳು ?

ಇವರು ಆಗಲೆ ಯಾವಾತನ್ನೊ ಕರಕೊಂಡು ಬಂದಾರಲ್ಲ, ರೇಷನ್ ಅಕ್ಕೀಗೆ ಮೂಲ ಆಗಿ ? ಲಕ್ಷಣಾಗಿ ಅಳಿಯ ಬಂದಾರೆ ಮನಿಗೆ, ಧೊಡ್ಡ ಹಬ್ಬ ಅನಾಯಸ, ಮುಂದಿನ್ನ ಯಾಕೆ ತರತಿದ್ದಾರು ಅಂತೀನಿ.

### ಪ್ರತಾಪರಾಯರು

. ಇಲ್ಲಿ ಬಾರೆ ಇಲ್ಲಿ.ಕರಿ, ನಿರ್ಮಲಾನ್ನ.ಕರಕೊಂಡು ಬಂದೀನಿ ನೋಡು ಆಕಿ ಗಂಡನ್ನ. ಈಗ ರೈಲಿಗೆ ಬಂದ್ರು.

### ಪದ್ದಮ್ಮ

(ಚಕಿತಳಾಗಿ) ರೈಲಿಗೆ ಬಂದ್ರು ! ಹಾಗಾದರೆ ನಾನು ತ್ವಾಟದಿಂದ ಕರಕೊಂಡು ಬಂದವರು ಯಾರು ?

### ಪ್ರತಾಪರಾಯರು

ತ್ವಾಟದಿಂದ ! ತ್ವಾಟದಿಂದ ಯಾರನ್ನ ಕರಕೊಂಡು ಬಂದಿ ? ಅಯ್ಯೊ ನಿನ್ನ........

### ಪದ್ದಮ್ಮ

ಏನೋ ಅನಾಹುತ ಆಗಿತ್ತಲ್ಲ ಇದು ? ಈತನಾರೆ ಹೇಳಬೇಕೊ ಇಲ್ಲೊ ನಮಗೆ (ಸಿಟ್ಟಿನಿಂದ) ಏನ್ರೆಪ್ಪಾ !

### ಹೊಸಬ

(ಏನೂ ತಿಳಿಯದೆ) ಏ ಏನ್ರಮ್ಮಾ ?

### ಪದ್ದಮ್ಮ

ನೀವು ನಮ್ಮ ಅಳಿಯ ಅಲ್ಲಂತಲ್ಲ ?

### ಹೊಸಬ

ನಾನ್ನಾನ್ನಾನೆಲ್ಲಿ ಹೇಹೇಹೇಳ್ದೆ, ನಿಮ್ಮ ...ಯ ಅಂತ ?

### ಪದ್ದಮ್ಮ

(ಮಿತಿಮೀರಿದ ಕೋಪದಿಂದ) ಏ, ತಿಂಮ ಅಂಬೋನೆ-

### ತಿಂಮ

ನಾನೆಲ್ಲಿ ಹೇಳಿದೆನಮ್ಮಾ ಈ ಮಾಮಾ ನಿನ್ನ ಅಳಿಯ ಅಂತ ?

**ಪ್ರತಾಪರಾಯರು**

ಇರಲಿ ಇರಲಿ, ಮಂದ್ಯಾಗೆ ನಗಿಪಾಟ್ಲು ಮಾಡಿಕೊ ಬ್ಯಾಡ್ರಿ. ರಘುಪತಿರಾಯರು ನಿಂತಾರೆ, ಮದಲು ಅವರಿಗೆ ಕದಲಾರತಿ ಮಾಡಮ್ಮ ನಿರ್ಮಲ.

**ತಿಂಮು**

(ಹೊಸಬನನ್ನು ಕುರಿತು) ಮಾಮಾ.

**ಹೊಸಬ**

(ಗಾಬರಿಯಿಂದ) ಏಏಏನೊ, ತಿತ್ತಿತ್ತಿಂಮಾ ?

**ತಿಂಮು**

ಅಕ್ಕ ಆ ಮಾಮುಗೆ ಕದಲಾರತಿ ಮಾಡ್ತಾಳೆ, ನಾನು ನಿನಗೆ ಬದಲಾರತಿ ಮಾಡಲೇನು ?

(ಎಲ್ಲವೂ ನಗೆಯಲ್ಲಿ ಸರಿಹೋಗುವದು)

---

# ಯದ್ವಾ-ತದ್ವಾ

ಅರ್ಥಾತ್

# ದೇವರ ಆತ್ಮಹತ್ಯೆ

(ಸಂಗೀತ ಆಟಕಂ)

## ಪಾತ್ರಗಳು

| | | |
|---|---|---|
| ೧. | ದೇವರು | ಸಾಕ್ಷಾತ್ ದೇವರು |
| ೨. | ನಾರದ | ಸೈಕಲ್‌ವರ್ಲ್ಡ್ಸ್ ಟ್ಯೂರಿಸ್ಟ್ |
| ೩. | ಯಮ | ಗಿರಾಕಿ ಇಲ್ಲದ ಯಮಲೋಕದ ಮಾಲಕ |
| ೪. ೫. ೬. ೭. | ಯಮದೂತರು | ಹಿಂದಿನ ಜನ್ಮದಲ್ಲಿ ಡಾಕ್ಟರರಾಗಿದ್ದ ನಾಲ್ವರು |
| ೮. | ಯದ್ವಾ | ಭೂಲೋಕದಲ್ಲಿಯ ಕನ್ನಡ ಶಾಲಾ ಮಾಸ್ತರ |
| ೯. | ತದ್ವಾ | ಸ್ತ್ರೀ ಪಾತ್ರ ಧರಿಸಿ ಸದ್ಯಕ್ಕೆ ಯದ್ವಾನ ಧರ್ಮಪತ್ನಿಯಾಗಿದ್ದಾನೆ. |

೧

(ಭೂಲೋಕ. ಯದ್ವಾನ ಮುರುಕು ಮನೆಯ ಮುಂದಿನ ಹರಕು ಚಪ್ಪರ ರಂಗಭೂಮಿಯ ಮೇಲೆ ರಾರಾಜಿಸುತ್ತಿದೆ. ಒಳಗೂ ಹೊರಗೂ ಸಹ ಯಾರೂ ಇಲ್ಲ. ಊರೆಲ್ಲ ಅಲೆದು ಬೇಸತ್ತ ಯದ್ವಾನ ಪ್ರವೇಶ.)

**ಯದ್ವಾ**

(ಗಟ್ಟಿಯಾಗಿ) ಯದ್ವಾನ ಮಾತು—ಆಹಾ ಇದೇನು ? ಮನೆಯಲ್ಲಿ ಯಾರೂ ಇಲ್ಲವೇ ಇಲ್ಲವಲ್ಲಾ ! ಎಡಗಡೆ ನೋಡಿ—ನನ್ನ ಗ್ರಹಿಣಿಯು ಎಲ್ಲಿ ಹೋಗಿರಬಹುದು ? ಇಲ್ಲಿಯೇ ಎಲ್ಲಿಗಾದರೂ ಹೋಗಿರಬಹುದು. (ತುಸು ಹೊತ್ತು ನಿಂತು) ಶತಪತ ಮಾಡಿ ಸುತ್ತಲೂ ನೋಡಿ—ಏನು ಕಾರಣ, ಇನ್ನೂ ಬರಲಿಲ್ಲವಲ್ಲ ? ಕಾರಣವೇನಿರಬಹುದು ? ಏನು ಕಾರಣ?........

(ಕಾಲಹಿಯಾನ ಶುರುವಾಗುವದು)

ಏನು ಕಾರಣ ? (ಇನ್ನೂ ಗಟ್ಟಿಯಾಗಿ) ಕರೀ ಎರಡು—(ಹಾಡುವನು)

**ಕಾಂಬೋಜಿ ರಾಗ, ಝುಂಪೆ ತಾಳ**

ಏನು ಕಾರಣ ನೀನು ಮಲಗಿದ್ಯೊ ಹರಿಯೆ ।
ಜಗದೀಶ ವಿಖ್ಯಾತ ಪಶ್ಚಿಮ ರಂಗ ಧಾಮಾ ॥ ಪಲ್ಲ ॥
ವಾಲಿ ಮೊದಲಾದ ದುರಾಂತ ದೈತ್ಯರಕೊಂದು
ಕಾಳಿಯ ಹೆಡೆ ತುಳಿದು ಮೈ ಅಲಸಿತೋ ।
ಲೀಲೆಯಿಂದಲಿ ನಿರ್ವಾಣದಲಿ ನೀನಿಂದು
ಆ ಲಜ್ಜೆಗಾಗಿ ತಲೆಬಾಗಿ ಮಲಗಿದೆ ದೇವಾ ॥

(ತದ್ವಾಳ ಪ್ರವೇಶ)

ಇದೇನು ತದ್ವಾ ? ಇಷ್ಟೇಕೆ ತಡವಾಯಿತು ?

**ತದ್ವಾ**

(ಗಂಟೆ ಹೊಡೆದಂತೆ) ನಾಚಿಕೆಯಿಂದ ತಲೆಬಾಗಿ—ಏನೂ ಇಲ್ಲ ಪ್ರಿಯ ಯದ್ವಾ. ಕೊಂಚ ಲೇಟು ಆಯಿತು ಅಷ್ಟೆ.

### ಯುದ್ವಾ

ಇಲ್ಲ ಇಲ್ಲ, ಅದೇನೂ ಕಾರಣವಿರಲೇ ಬೇಕು. ಹೇಳು ಹೇಳು, ಏಕೆ ತಡವಾಯಿತು ಹೇಳುವಂಥಾತ್ತಳಾಗು ತದ್ವಾ. ಸನಿಯ ಬಂದು ಗಲ್ಲ ಹಿಡಿದು-ಹೇಳು, ಅದೇಕೆ ಇಷ್ಟು ತಡವಾಯಿತು ? ನಿಜವನ್ನೆ ಹೇಳು.

### ತದ್ವಾ

ನಿಜವನ್ನೆ ಹೇಳಿಬಿಡಲೆ ಯುದ್ವಾ ? ತಲೆ ಮುಟ್ಟಿಗೊಳ್ಳುತ್ತೆ—ಬೇರಾವ ಕಾರಣವೂ ಇಲ್ಲ ಪ್ರಾಣಪ್ರಿಯಾ, ಟೋಪನ್ನು ಸರಿಯಾಗಿ ಕೂಡಲಿಲ್ಲ. ಅದಕ್ಕಾಗಿಯೇ........

### ಯುದ್ವಾ

ಹೋಗಲಿ ಬಿಡು ಪ್ರಾಣಪ್ರಿಯೆ, ಕ್ಷಮಿಸುವೆನು.

### ತದ್ವಾ

ನಾನು ಬರಲು ತಡವಾದುದಕ್ಕೆ ನಿನಗೆ ಕೋಪ ಬಂದಿತೇನು ಯುದ್ವಾ ? ಶಾಂತಿ ಮೂರ್ತಿಯಾದ ನೀನು ಹೀಗೆ ಎಲ್ಲಕ್ಕೂ ಸಿಟ್ಟಾದರೆ ಹೇಗೆ, ಚಿಕ್ಕ ಬಾಲಕರಂತೆ ?

### ಯುದ್ವಾ

ಇಲ್ಲ ಇಲ್ಲ, ನಿನ್ನ ಮೇಲೆ ಸಿಟ್ಟು ಎಂದರೇನು ? ಏನು, ಬಾಲಕರಂತೆ ಎಂದೆ ಅಲ್ಲವೆ ?

(ಪದ್ಯ, ಅಭಿನಯ ಸಹಿತ)

ಬಾಲಕನಾಗಿರೆ ಹಾಲನು ಕುಡಿಸುತ
ಪಾಲಿಸಿದವಳಾರ್ ನೀ ತಾಯೆ ।
ಲಾಲಿಸಿ ನುಡಿಗಳ ಮೇಲಿನ ಮುತ್ತನು
ಪಾಲಿಸಿದವಳಾರ್ ನೀ ತಾಯೆ ॥

ರೋಗದಿ ತಲೆ ಬಿಸಿಯಾಗಿರೆ ನಿದ್ದೆಯ
ನೀಗಿದವಳಾರ್ ನೀ ತಾಯೆ ।
ಆಡುತ ನಾನೂ ಬೀಳುತ ಓಡಲು
ಓಡಿ ಹಿಡಿದವಳಾರ್ ನೀ ತಾಯೆ ॥

ಅಕ್ಕರೆ ನಿನ್ನಯ ಮಕ್ಕಳ ಮೇಲಿನ
ಸಕ್ಕರೆಗಿಂತಲು ಸವಿ ತಾಯೆ ।
ಲೆಕ್ಕಿಸಿ ಉಪಕಾರಕ್ಕುಪಕಾರವ
ತಕ್ಕಂತೆಯೆ ಮಾಡುವೆ ತಾಯೆ ॥

**ತದ್ವಾ**

(ಯುದ್ವಾನ ಬಾಯಿಗೆ ಕೈಯಿಟ್ಟು) ಸಾಕು ಯುದ್ವಾ ಸಾಕು, ನನ್ನ ಗುಣ ಗಾನ ಸಾಕು. ನೀನು ಹೋಗಿದ್ದ ಕೆಲಸವೇನಾಯಿತು, ಬೇಗನೆ ಅದನ್ನು ಅರುಹು.

**ಯುದ್ವಾ**

ಆಗುವದೇನು ಪ್ರಿಯೇ, ಎಲ್ಲವೂ ತಿಳಿದ ವಿಷಯವೇ ಇದೆ. ಕಾಣ ಬಾರದವರನ್ನೆಲ್ಲ ಕಂಡೆ, ಕೇಳಬಾರದವರನ್ನೆಲ್ಲ ಕೇಳಿದೆ....

**ತದ್ವಾ**

(ಮಧ್ಯದಲ್ಲಿಯೇ ಬಾಯಿಹಾಕಿ) ಅದಕ್ಕೇ ಕೆಲಸವಾಗಿಲ್ಲ, ಪ್ರಿಯಾ. ಕಾಣಬಾರದವರನ್ನು ಕಂಡರೆ ಕೇಳಬಾರದವರನ್ನು ಕೇಳಿದರೆ ಏನು ಪ್ರಯೋಜನ ?

**ಯುದ್ವಾ**

ಅಲ್ಲ ಅಲ್ಲ ಪ್ರಿಯೇ. ನನ್ನ ಮಾತು ಇನ್ನೂ ಮುಗಿದಿಲ್ಲ. ಮುಗಿಯುವ ವರೆಗೂ ದಯವಿಟ್ಟು ಸುಮ್ಮನಿರು. ಇಂದು ಶನಿವಾರವೆಂದು ಎಲ್ಲರಿಗೂ ಹೇಳಿ ಕೊಂಡೆ. ಇಂದು ತರದಿದ್ದರೆ ಈ ವಾರದ ರೇಶನ್ ಹೋಗುವದೆಂದು ಹತ್ತು ಬಾರಿ ಹೇಳಿದೆ. ಯಾರೂ ಮೂರು ರೂಪಾಯಿಗಳ ಸಾಲವನ್ನು ಕೊಡಲು ಸಿದ್ಧರಿಲ್ಲ. ಈ ಲಂಪಟವೆಲ್ಲವೂ ನಿನ್ನಿಂದಲೇ ನೋಡು, ತದ್ವಾ. ನಾನೊಬ್ಬನೇ ಆಗಿದ್ದರೆ ಹೇಗೋ ಸುಖವಾಗಿ ಇದ್ದು ಬಿಡುತ್ತಿದ್ದೆ. ಈ ದರಿದ್ರ ಕನ್ನಡ ಶಾಲೆಯ ಮಾಸ್ತರ ಕೆಲಸವೇಕೆ ಬೇಕಿತ್ತು? ದೇಶಭಕ್ತನಾಗಿಯಾದರೂ ಹೊಟ್ಟೆ ಹೊರೆದು ಕೊಂಡು ಬಿಡುತ್ತಿದ್ದೆ. ನೀನು ಎಲ್ಲಿಗಾದರೂ ಹೋಗಿಬಿಡಬಾರದೇ, ಪ್ರಾಣ ಪ್ರಿಯೇ ?

**ತದ್ವಾ**

ದುಃಖದಿಂದ—ನೀನೇ ಹೀಗಂದರೆ ನಾನೆಲ್ಲಿ ಹೋಗಲಿ ಪ್ರಿಯತಮಾ ? ನಿನ್ನ ಹೊರತು ನನಗೆ ಬೇರಿಲ್ಲ. ನೀನೇ ನನ್ನ ಸರ್ವಸ್ವವಲ್ಲವೇ ?

( ಹಾಡು ) ಶಹಾನರಾಗ-ಝಂಪೆತಾಳ

ತಂದೆ ತಾಯಿಯು ನೀನೆ । ಬಂಧು ಬಳಗವು ನೀನೆ
ಮತ್ತೊಮ್ಮೆ-ತಂದೆತಾಯಿಯು ನೀನೆ । ಬಂಧು ಬಳಗವು ನೀನೆ
ಎಂದೆದಿಗೂ ನಿನ್ನ । ಎಂದೆಂದಿಗೂ ನಿನ್ನ
ನಂಬಿದೆನೊ ಯದ್ವಯ್ಯಾ ॥
ಕಂಡು ಕಂಡು ನೀ ಎನ್ನಾ ಕೈಯಾ ಬಿಡುವರೇನೋ
ಪುಂಡರೀಕಾಕ್ಷ ಶ್ರೀ ಪುರುಷೋತ್ತಮನೆ ಯದ್ವಾ ॥

## ಯುದ್ವಾ

ದೂರ ಸರಿ ಮೋಹನಾಂಗಿ. ನೀನು ಮನೆಗೆ ನಡೆ. ಓಹೋ! ಇದೆ ಮನೆ ಅಲ್ಲವೆ, ಮರೆತಿದ್ದೆ. ನಾನೇ ಮನೆಬಿಟ್ಟು ಹೋಗಿಬಿಡುತ್ತೇನೆ ಹಾಗಾದರೆ.

## ತದ್ವಾ

ಪ್ರೀಯಾ, ಹೀಗೇಕೆ ಮಾಡುವಿ ? ಮಾಸ್ತರ ಕೆಲಸಕ್ಕೆ ಸೇರಿದ ನಿನ್ನನ್ನು ಲಗ್ನವಾದುದೇ ನನ್ನ ತಪ್ಪೇ ? ನಿನಗೆ ಆರು ತಿಂಗಳಿಗೊಮ್ಮೆ ಪಗಾರ ದೊರೆತರೆ ನನ್ನ ಮೇಲೇಕೆ ಕೋಪತೋರುತ್ತೀದಿ ? ಪ್ರಾಣಪ್ರಿಯಾ, ನಾನು ನನ್ನ ತಂದೆಯ ಕೈಯಿಂದಲೂ ಕಠಿಣೋಕ್ತಿಗಳನ್ನು ತಿಂದವಳಲ್ಲ.

## ಯುದ್ವಾ

ಅಹುದಹುದು. ಯಾರೂ ಕೈಯಿಂದ ಕಠಿಣೋಕ್ತಿಗಳನ್ನು ತಿನ್ನುವದಿಲ್ಲ, ಬಾಯಿಂದ ತಿನ್ನುತ್ತಾರೆ. ನನ್ನ ಮನೋವಲ್ಲಭೇ, ನನ್ನನ್ನು ಪರಿಪರಿಯಾಗಿ ಪೀಡಿಸಬೇಡ. ನನಗೆ ಈ ಬಾಳಿನಲ್ಲಿಯೇ ಮನಸ್ಸಿಲ್ಲ....

## ತದ್ವಾ

( ಆರ್ಧದಲ್ಲಿಯೇ ) ಅದೇಕೆ ? ಮನಸ್ಸು ಏಕಿಲ್ಲ ?

( ಹಾಡು ) ಬೇಹಾಗ್ ರಾಗ-ಆದಿತಾಳ

ಮನಶ್ಯಾಕಿಲ್ಲವೊ ಮಾರುತಿ ।
ನಿನ್ನ ಕನಸೀನೊಳ್, ಮನಸೀನೋಳ್
ನೆನೆಸೂವೆನಯ್ಯಾ ।
ಮನಶ್ಯಾಕಿಲ್ಲವೊ ಮಾರುತಿ ॥

## ಯುದ್ವಾ

ನೀನು ಏನು ಹೇಳಿದರೂ, ಯಾವ ಹಾಡು ಹೇಳಿದರೂ, ನಾನಂತೂ ಮನೆಗೆ ಬರಲು ಸಿದ್ಧನಿಲ್ಲ. ಎಲ್ಲಿಗಾದರೂ ಹಾಳಾಗಿ ಹೋಗು, ನನ್ನ ಮೋಹದ ಗಿಳಿಯೇ.

## ತದ್ವಾ

ಯುದ್ವಾ, ಸದ್ಯಕ್ಕಂತೂ ಅದೇಕೊ ನಿನ್ನ ಮನಸ್ಸು ಬಹಳ ಬದಲಿಸಿದೆ. ಇನ್ನು ಮುಂದಾದರೂ ಎಲ್ಲ ಮಾಸ್ತರರಿಗೂ ಪ್ರತಿತಿಂಗಳೂ ಪಗಾರ ದೊರೆಯಲೆಂದು ಪರಮಾತ್ಮನನ್ನು ಪ್ರಾರ್ಥಿಸೋಣ ಬಾ.

## ಯುದ್ವಾ

ಆಗಲಿ, ಯತ್ನವಿಲ್ಲ.

(ಇಬ್ಬರೂ ಮುಂದೆಬಂದು ಕೈಜೋಡಿಸಿ ನಿಂತು ಹಾಡುವರು)

ಜಗದೀಶ ನೀನೆ ಕಾಯಬೇಕು ಚಿಕ್ಕ ಬಾಲರಾ
ಹಗಲಿರಳು ನಿನ್ನ ಧ್ಯಾನ ಮಾಳ್ಪ ದೀನರಾ ॥
ಬುದ್ಧಿ ಇಲ್ಲ ವಿದ್ಯೆ ಇಲ್ಲ ಶಕ್ತಿ ಇಲ್ಲವೂ
ಮೊದ್ದು ಗೆಳೆಯರೊಡನೆ ನಾವು ಆಡಬಲ್ಲೆವೂ ।
ತರುಳರನ್ನು ಮರೆಯಬೇಡ ಕರುಣಿ ದೇವನೇ
ಪರಿಪರಿಂದ ಪೂಜೆಗೈವೆ ನಾನು ನಿನ್ನನೂ ॥
ಜಗದೀಶ ನೀನೆ ಕಾಯಬೇಕು ಚಿಕ್ಕಬಾಲರಾ
ಹಗಲಿರಳು ನಿನ್ನ ಧ್ಯಾನ ಮಾಳ್ಪ ನಮ್ಮಿಬ್ಬರಾ ॥

( ತದ್ವಾಳ ನಿಷ್ಕ್ರಮಣ )

ತುಸು ಹೊತ್ತು ಯೋಚಿಸಿದಂತೆ ಮಾಡಿ- ಹಾ ದೇವಾ ! ನಮ್ಮ ಭೂಲೋಕಕ್ಕೆ ಒಂದು ಬಾರಿ ಬಂದು ನೋಡು. ನಿನ್ನ ಆಗಿನ ಕಾಲಗಳಿಲ್ಲ ಈಗ. ತಾಟಕಿಯನ್ನು ನೀನು ಈಗ ಕೊಂದಿದ್ದರೆ ತಿಳಿಯುತ್ತಿತ್ತು ನಿನ್ನ ಆಟವೆಲ್ಲ. ನಿನ್ನ ಕುಬೇರನ ಹಣವೆಲ್ಲ ವಕೀಲನ ಕಾರಕೂನರ ಕಾಪೀ ಸ್ಟಾಂಪಿಗೇ ಕರ್ಚಾಗಿ, ಜಾಮೀನ ಮೇಲೆ ಹೊರಬಂದಾಗ ವಕೀಲರ ತಿಗಣಿಯ ಗುಡಾರದ ಮೇಲೆಯೇ ನಿನ್ನ ಶಯನವಾಗುತ್ತಿತ್ತೋ, ದೇವರ ದೇವ; ಶೇಷಶಯನನಾದ ನಿನಗೆ ತಿಗಣಿಯ ಭಯವೇನು ಎನ್ನುವಿಯೇನು ? ಸೆಕ್ಶನ್ ಮುನ್ನೂರ ಎರಡರ

ಕೆಳಗೆ ನಿನಗೆ ಮೂರುಬಾರಿ ಗಲ್ ಆಗುತ್ತಿತ್ತು; ಪ್ರಹ್ಲಾದನಿಗಾಗಲಿಲ್ಲವೇ ಎನ್ನುವಿ ಏನು? ಆಜನ್ಮಪರ್ಯಂತ ದ್ವೀಪಾಂತರ ವಾಸವಾಗುತ್ತಿತ್ತು; ಪ್ರಳಯ ಕಾಲದಲ್ಲಿ ವಟಪತ್ರ ಹಾಸಿಗೆಯ ಮೇಲೆ ತೇಲಾಡುವ ನಿನಗೆ ದ್ವೀಪಾಂತರ ವಾಸದ ಭಯವೇನು ಎನ್ನುವಿ ಏನು? ಅಹುದು, ಅದೂ ನಿಜವೇ.

ಹೇ ದೇವಾ! ನಿನ್ನ ಲೀಲೆಯು ಅಗಾಧವಾದುದು, ಅದ್ಭುತವಾದುದು. ನೃಸಿಂಹಾವತಾರದಲ್ಲಿ ಸಪ್ತಸಮುದ್ರಗಳೊಳಗಿಂದ ಬಂದು ಶಬರಿಯ ಉತ್ತಿಷ್ಠವಂ ತಿಂದು ಕೃತಯುಗದಲ್ಲಿ ಧ್ರುವನನ್ನು ಕಾಪಾಡಿದೆಯಂತೆ, ಇದು ಸುಳ್ಳೇ. ಸೀತೆಯನ್ನು ಯಾದವರು ವಸ್ತ್ರಾಪಹರಣ ಮಾಡುವಾಗ ಸ್ತಂಭವಂ ಸೀಳಿ ಬಂದು ಸುಧಾಮನಿಗೆ ಹಿಡಿ ಅವಲಕ್ಕಿಗೆ ಬರುವಷ್ಟು ಭಾಗ್ಯವನ್ನು ಕೊಟ್ಟೆಯಂತೆ. ನಮ್ಮ ಕೆರೆಗೆ ನೀರು ಬಂದರೆ ನಾನೂ ಒಂದು ಗೂಡೆ ನೆಲ್ಲನ್ನು ಕೊಡುತ್ತೇನೆ. ಗಜೇಂದ್ರ ಮೋಕ್ಷದಲ್ಲಿ ಸತಿ ಅನುಸೂಯಳ ಮೊರೆ ಕೇಳಿ, ಕೂರ್ಮಾವತಾರದಿಂದ ಬಂದು ಗಿಡದಮರೆಯಲಿ ನಿಂತು ಹಿರಣ್ಯಾಕ್ಷನನ್ನು ಕೊಂದು ಕಾಪಾಡಿದಿಯಂತೆ, ಇದು ಸುಳ್ಳೇ? ಎಳೆಮೀಸೆ ಪಣೆಯಿಂದ ಚಿಗುರಿ ಚಿಗುರದ ಮುನ್ನೆ ವೀರ ರಾವಣನ ಗೆಲ್ದ ಪಾರ್ಥ ನೀನಂತೆ, ಇದೂ ಸುಳ್ಳೇ? ಇವೆಲ್ಲವೂ ಸುಳ್ಳೇ ಆದರೆ ನೀನಿರುವವದೇ ಸುಳ್ಳು. ಇಲ್ಲ ಇಲ್ಲ, ನೀನು ಇರುವಿ ದೇವಾ. ನಿನ್ನಾಣೆಯಾಗಿಯೂ ನೀನಿರುವಿ. ಆದರೆ ನೀನು ಅದೆಂತಹ ಹೇಡಿ ಆಗಿರುವಿಯಲ್ಲಾ, ದೇವಾ? ಇಷ್ಟೆಲ್ಲವಂ ಮಾಡಿದ ನಿನಗೆ ಇದು ಮಾತ್ರ ಹೇಗೆ ಅಸಾಧ್ಯವಾಯಿತೋ ಸರ್ವಶಕ್ತಾ? ನಾನೇನು ಲಂಚವಂ ಬೇಡುತ್ತಿಲ್ಲ, ನಿನ್ನ ಹಳೆಯ ಭಕ್ತರು ವರಗಳಂ ಕೇಳಿದಂತೆ, ನಾನು ಬೇಡುವದು ನನ್ನ ದುಡಿತಕ್ಕೆ ಬಾಕಿ ಇರುವ ಆರು ತಿಂಗಳ ಪಗಾರ ಮಾತ್ರ. ಹಿರಣ್ಯಕಶ್ಯಪುವಿನ ಕಾಲದಲ್ಲಿಯೂ ಸಹ ಚಂಡಾಮರ್ಕರಿಗೆ ಪಗಾರವು ಹೀಗೆ ಉದ್ದರಿ ಬೀಳುತ್ತಿದ್ದಿಲ್ಲವಂತೆ. ಈಗೇಕೆ ಹೀಗಾಗಿ ಬಿಟ್ಟಿತು ದೇವವರೇಣ್ಯ? ನಮ್ಮ ಬೋರ್ಡು ಅಧ್ಯಕ್ಷರಿಗೆ ಪ್ರತ್ಯಕ್ಷವಾಗಿ ಹೇಳಿ ನಮ್ಮೆಲ್ಲ ಮಾಸ್ತರರ ಪಗಾರವು ಪ್ರತಿಂಗಳೂ ಬರುವಂತೆ ಮಾಡಲಾರೆಯಾ, ದೇವಾ. ಮಾಡಲಾರಿ ಮಾಡಲಾರಿ. ಅಲ್ಲಿ ನಿನ್ನ ಆಟವು ಸಾಗುವಂತಿಲ್ಲ. ಏಕೆ, ಏಕೆ? ನೀನು ಬೋರ್ಡಿನ ಮೆಂಬರನಲ್ಲ. ನಿನ್ನ ಕೈಯಲ್ಲಿ ಓಟುಗಳಿಲ್ಲ. ದೇವಾ, ಧಿಕ್ಕಾರ ಧಿಕ್ಕಾರ! ನಿನ್ನ ಕಿಂತಲೂ ನಮ್ಮೂರ ಮೆಂಬರು ದಾಣೀ ಕೊಟ್ರವ್ವ ಮೇಲು—ಪಡದೆಯು ಬೀಳವದು.

( ತೆರೆ ಬೀಳುವದು )

೨

( ಹಾಳು ಬಿದ್ದ ದೇವಲೋಕ. ದರಿದ್ರಬಡಿದ ದೇವನು ತನ್ನ ಅರ್ಧ ಬಿದ್ದ ಗುಡಿಯಲ್ಲಿ ತಲೆಗೆ ಕೈ ಕೊಟ್ಟು ಕುಳಿತು ಚಿಂತಾಮಗ್ನನಾಗಿದ್ದಾನೆ. ಅವನ ಪ್ಯಾಂಟು ಶರಟುಗಳೆಲ್ಲವೂ ಹೋಲಸಾಗಿವೆ. ಹಳೆಯ ಟೈಯೊಂದು ಕತ್ತಿನಲ್ಲಿ ನೇತಾಡುತ್ತಿದೆ. ಬಂಣ ಮಾಸಿದ ಕಿರೀಟವು ತಲೆಯನ್ನು ಸಿಂಗರಿಸಿದೆ. ಪಡದೆ ಗಡಗಡನೆ ಮೇಲೆ ಹೋದ ಶಬ್ದಕ್ಕೆ ಬೆಚ್ಚಿಬಿದ್ದು ಎದ್ದು ನಿಂತು, ಶಂಖ ಚಕ್ರ ಗದಾಪದ್ಮಗಳನ್ನು ಧರಿಸಿಕೊಂಡು ಮುಂದೆ ಬರುವನು. )

( ಹಾಡು ) ಮೋಹನರಾಗ-ಝಂಪೆ ತಾಳ

ಕಲಿಯುಗದ ಮಹಿಮೆಯು ಕಾಣಬಂತೀಗಾ
ಕಾಯಿಲೆ ಒಗೆದೊಗೆದು ಕೊಲ್ಲುವರು ಎನ್ನಾ ।
ಕಲಿಯುಗದ ಮಹಿಮೆಯು ಕಾಣಬಂತೀಗಾ ॥
ಹಣವಂತರಾದವರು ಬಣಗಳನೆ ಕಟ್ಟಿದರು
ಕಣಜಗಳ ಕಟ್ಟಿದರೂ ಕುಬೇರನವರೂ ।
ಅನ್ನವಿಲ್ಲದವರೆಲ್ಲ ಎನ್ನ ಬೆನ್ನಹತ್ತಿಹರು
ಏನೆಗೈಯಲಿ ನಾನು ಕುಬೇರನಾಟಾ ॥
ಕಲಿಯುಗದ ಮಹಿಮೆಯು ಕಾಣಬಂತೀಗಾ ॥
ಕಾಯಿಲೆ ಒಗೆದೊಗೆದು ಕೊಲ್ಲುವರು ಎನ್ನಾ ।

ಆತ್ಮ–ಹಿಂದೆ ನಡೆದಷ್ಟು ಕಾಲ ಇನ್ನು ಮುಂದೆಯೂ ಮರ್ಯಾದೆಯಿಂದ ನಡೆಯುವದು ಸುಳ್ಳುಮಾತು. ಇಡೀ ಜಗತ್ತೆಲ್ಲವೂ ಆ ವಂಚಕನಾದ ಕಾಂಚಾನದ ಕುಬೇರನ ರಾಜ್ಯವಾಗಿ ಬಿಟ್ಟಿದೆ. ಪ್ರಕಾಶ–ಕುಬೇರಾ ! ಪಾಪಿ, ದ್ರೋಹಿ ! ಕಡೆಗೂ ನನ್ನ ರಾಜ್ಯವನ್ನೆಲ್ಲ ಆಕ್ರಮಿಸಿಕೊಂಡು ನನಗೇ ಇರಲು ಎಡೆ ಇಲ್ಲದಂತೆ ಮಾಡಿದೆಯಾ ? ಇರಲಿ ಇರಲಿ. ಕುಬೇರನ ಕೃಪೆಗೆ ಪಾತ್ರರಾದವರು ನನ್ನ ಕಡೆಗೆ ತಿರುಗಿ ಸಹ ನೋಡುವದಿಲ್ಲ. ಬಡ ಹೇಡಿಗಳು, ಹೆಂಡತಿ ಸತ್ತಗೂರಿನ ಮುದುಕರು, ಗಂಡ ಸತ್ತು ಅಳುವವರು, ತೊನ್ನು ಕ್ಷಯ ಪಾರ್ಶ್ವವಾಯು ಮುಂತಾದ ರೋಗಗಳುಳ್ಳವರು, ನಪಾಸಾಗುವ ವಿದ್ಯಾರ್ಥಿಗಳು, ಕುರುಡರು, ಕುಂಟರು ನನಗೆ ಗಂಟು ಬೀಳುತ್ತಾರೆ. ಈ ಭೂಲೋಕದವರಂತೂ ನನ್ನನ್ನು ದಕ್ಷಿಣ ಕನ್ನಡ ಜಿಲ್ಲೆಯವನೆಂದು ತಿಳಿದಂತಿದೆ; ಅದಕ್ಕೇ

ಬರೀ ತೆಂಗಿನ ಕಾಯಿಯನ್ನೇ ತರುತ್ತಾರೆ. ತಮ್ಮಲ್ಲಿಯ ಅಧಿಕಾರಿಗಳಂತೆ ನನ್ನನ್ನೂ ಲಂಚಖೋರನೆಂದು ಎಣಿಸಿದ್ದಾರೆ. ಮೂರಾಣೆಯ ತೆಂಗಿನ ಕಾಯಿಯನ್ನು ತೋರಿಸಿ ಏನೆಲ್ಲವನ್ನು ಬೇಡುತ್ತಾರೆ ? ' ನನ್ನ ಏಳನೆ ಕೂಸಿನ ಕಿವಿ ಸೋರುವದನ್ನು ನಿಲ್ಲಿಸು ' ' ನನ್ನ ಮನೆಯಲ್ಲಿಯೇ ಸಕುಟುಂಬವಾಗಿ ಧ್ವಜ ಹಾಕಿರುವ ನನ್ನ ಭಾವಮೈದುನರಿಗೆ ಬೇರೆ ಯಾವ ಊರಲ್ಲಿಯಾದರೂ ಒಂದು ನವುಕರಿ ದೊರೆಯುವಂತೆ ಮಾಡು ', ' ಹೇಗಾದರೂ ಮಾಡಿ ಈ ಬಾರಿ ಎಮ್ಮೆಲೆ ಆಗಬೇಕೆಂಬ ಹುಚ್ಚು ಹಿಡಿದಿರುವ ನನ್ನ ಎಬಡ ಗಂಡನಿಗೆ ತಲೆ ಇದ್ದರೆ ಅದನ್ನು ತಿದ್ದಿಕೊಡು ', ' ನನ್ನ ಹೆಂಡತಿಯು ತಿಂಗಳಹಿಂದೆ ಹೆತ್ತಿರುವ ಹೆಣ್ಣು ಕೂಸು ಆದಷ್ಟು ಜಾಗ್ರತಿ ಗಂಡಾಗಲಿ', ' ಬಿನ್ನಿ ಮಿಲ್ಲಿನ ಬಟ್ಟೆಯೆಲ್ಲವೂ ನನ್ನ ಅಂಗಡಿಗೇ ಬರುವಂತೆ ಮಾಡು', ' ನನ್ನ ಪತಿದೇವನ ವಿಮೆಯ ಹಣವನ್ನು ಬೇಗನೇ ನನ್ನ ಕೈಗೆ ತರಿಸಿಕೊಡು', ' ನಾವು ಗೋಡಾವು ನಗಳನ್ನು ಬಾಡಿಗೆಗೆ ಹಿಡಿದು ತುಂಬಿಟ್ಟಿರುವ ನೆಲಗಡಲೆಯ ಬೆಲೆಯು ಬೇಗನೆ ಬಹಳ ಮೇಲೆ ಹೋಗುವಂತೆ ಮಾಡಿಬಿಡು', ' ನಾನು ಚುನಾವಣೆಯಲ್ಲಿ ಯಾವ ಪಾರ್ಟಿಯ ಬಾಲ ಹಿಡಿಯುತ್ತೇನೆಯೋ ಅದೇ ಪಾರ್ಟಿಯ ಕೈಯಲ್ಲಿಯೇ ಅಧಿಕಾರವನ್ನು ತಂದುಕೊಡು; ಆಮೇಲೆ ಚುನಾವಣೆಯೇ ಆಗದಂತೆ ನೋಡಿಕೊ' ಇತ್ಯಾದಿ ಇತ್ಯಾದಿ ಇತ್ಯಾದಿ ವರಗಳನ್ನು ಬೇಡುತ್ತಿದ್ದಾರೆ. ತಮ್ಮಲ್ಲಿರುವ ನನ್ನನ್ನು ಎಂದೋ ಮರೆತುಬಿಟ್ಟು ನನಗೆ ಕಟ್ಟಿರುವ ಕೋಟೆಗಳನ್ನು ಪೂಜಿಸುತ್ತಾರೆ.ತಮಗೆ ಎರಡು ಕೈಗಳಿರುವ ಕಾರಣ ನನಗೆ ನಾಲ್ಕು ಕೈಗಳನ್ನು ಹಚ್ಚಿದ್ದಾರೆ. ನಾಲ್ಕು ಕಾಲುಗಳುಳ್ಳ ಪಶುಗಳು ನನಗೆ ಎಂಟು ಕಾಲುಗಳೂ ಎರಡು ಬಾಲಗಳೂ ಇವೆ ಎಂದು ಅಪಪ್ರಚಾರಮಾಡಹತ್ತಿವೆ.

ಬೇಡ, ಬೇಡ, ಈ ಅವಮಾನ ಖಂಡಿತವಾಗಿಯೂ ಬೇಡ. ಇಂತಹ ನೀಚ ಜನರ ದೇವರಾಗಿರುವದ ಕಿಂತಲೂ ದೇವತೆಗಳಲ್ಲಿಯ ನೀಚನಾದ ಕುಬೇರನಾಗಿರುವದೇ ಮೇಲು. ಭೂಲೋಕದ ಒಬ್ಬ ಮಹಾತ್ಮನಂತೂ—ಅವನಾರೋ ಕನ್ನಡ ಶಾಲಾ ಮಾಸ್ತರನಂತೆ—ನನ್ನನ್ನು ಅಕಳಾ ಸಕಳಾ ಬೈದು ಬಿಟ್ಟ. ಅವನಂದುದೆಲ್ಲವನ್ನೂ ನೆನೆಸಿಕೊಳ್ಳಲು ಸಹ ನಾಚಿಕೆಯಾಗುತ್ತಿದೆ. ಇಷ್ಟು ಅವಮಾನವಾದ ಮೇಲೆ ನಾನು ಇರಬಾರದು. ಹೋಗಿಬಿಡಬೇಕು. ಕುಬೇರಾ, ನೀನೇ ಇರು. ನಾನು ಹೋಗುತ್ತೇನೆ. ಆತ್ಮಹತ್ಯವೊಂದೇ ನನಗಿರುವ ಉಪಾಯ. ಇಗೋ ಸತ್ತೆ.

( ಕತ್ತಿನಲ್ಲಿಯ ಟೈ ಗಂಟನ್ನು ಜಗ್ಗಿ ಕೊಳ್ಳುತ್ತ )

( ಹಾಡು ) ರಾಗ ಸಿಂಧುಭೈರವಿ—ಆದಿತಾಳ

ಈಸಬೇಕೂ ಇದ್ದು ಜಯಿಸ ಬೇಕೂ
ಹೇಸಿಕೆ ಸಂಸಾರದಲ್ಲಿ ಆಸೆ ಲೇಸು ಇಡಧಾಂಗೆ ।
ಈಸಬೇಕೂ ಇದ್ದು ಜಯಿಸ ಬೇಕೂ.
ತಾವು ರಸ ಜಲದಂತೆ ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮನೆಸುತ ಪಾಡಿ ಕಾಮಿತ ಕೈಕೊಂಬರೆಲ್ಲ ।
ಈಸಬೇಕೂ ಇದ್ದು ಜಯಿಸ ಬೇಕೂ

ಹಾ ಕುಬೇರಾ, ಕುಬೇರಾ ! ಕಡೆಗೆ ನೀನೇ ನನಗೆ ಮೃತ್ಯುವಾದೆಯಾ!

( ಧುಪ್ಪೆಂದು ನೆಲಕ್ಕೆ ಬಿದ್ದು, ಸೊಟ್ಟಾಗಿದ್ದ ಕಿರೀಟವನ್ನು ಕೈಯಿಂದ ಸರಿಪಡಿಸಿ ಕೊಂಡು ಸಾಯುವನು. )

( ತಕರಾರುಮಾಡಿ ಬಹು ಹೊತ್ತಿನನಂತರ ತೆರೆ ಬೀಳುವದು. )

೩

(ಯಮಲೋಕ. ಖಾಕಿ ಚಡ್ಡಿಯನ್ನು ಧರಿಸಿದ ಯಮಧರ್ಮನು ತನ್ನ ಕುರ್ಚಾಸನದಲ್ಲಿ ಕುಳಿತು 'ಡ್ಯಾಗರ್ ಕಟ್' ಮೀಸೆಯ ಮೇಲೆ ಕೈಯಾಡಿಸುತ್ತ ಮುಂದಿರುವ ಇಂಗ್ಲೀಷ ವಾರಪತ್ರಿಕೆಯನ್ನು ಕಣ್ಣಿಂದ ಓದುತ್ತಿರುವನು. ದಿಕ್ಕಿಗೊಬ್ಬರು ಅಸ್ಥಿಪಂಜರಗಳಂತಿರುವ ನಾಲ್ಕು ಬರೀ ಮೈಯ ಭಟರು ನಿಲ್ಲಲು ಸಹ ತ್ರಾಣವಿಲ್ಲದೆ ಕಂಬಗಳಿಗೆ ಆತು ಕುಳಿತಿದ್ದಾರೆ. ತೆರೆ ಮೇಲೇರಿ ಅರ್ಧಕ್ಕೇ ನಿಲ್ಲುವದು.

## ಯಮ

ಎಲೈ ದೂತಶಿಖಾಮಣಿಗಳೇ !(ಅರ್ಧ ಜೋತು ಬಿದ್ದಿರುವ ಪರದೆಯನ್ನು ತೋರಿಸಿ) ಇದೇನು ಅಪಶಕುನ ? ಆರಂಭದಲ್ಲಿಯೇ ಹೀಗಾಗಿಬಿಟ್ಟಿತು ? ಈ ಮಧ್ಯೆ ಅದೇಕೋ ನನ್ನ ಲೋಕಕ್ಕೆ ಗಿರಾಕಿಗಳೇ ಬರುತ್ತಿಲ್ಲ. ಭೂಲೋಕದಲ್ಲಿ ಬದುಕಿರುವಾಗಲೇ ಎಲ್ಲರೂ ಈ ದಂಡನೆಗಳನ್ನು ಅನುಭವಿಸುತ್ತಿರ್ರುವಂತೆ ಕಾಣುತ್ತಿದೆ. ಮೊದಲು ಇಲ್ಲಿದ್ದ ಕೆಲವು ದೂತರು ಸಹ ಓಡಿ ಹೋಗಿ ಭೂಲೋಕದಲ್ಲಿ ಸೇರಿ ಇಲ್ಲಿಯಕಿಂತಲೂ ಹೆಚ್ಚು ಸುಖವಾಗಿರುವರೆಂದು ವರ್ತಮಾನ ಪತ್ರಗಳಿಂದ ತಿಳಿಮಬಂದಿದೆ. ಓಹೋ, ನಾರದಮುನಿಗಳ ಆಗಮನವಾದಂತಾಯಿತು.

(ಎಡಗಡೆ ನೋಡುತ್ತ ನಿಲ್ಲುವನು. ಸೈಕಲ್ಲು ಏರಿ ಕೈಯಲ್ಲಿ ಪಂಪು ಹಿಡಿದ ನಾರದರು ಬಲಗಡೆಯಿಂದ ಪ್ರವೇಶಿಸುವರು.)

ನಾರದ

(ಹಾಡು) ರಾಗ ಮಾಂಡ್-ಏಕತಾಳ

ಆರಿರೇ ಯನ್ನಯ ಸಮಾನರಾರೈ ಧರಣಿಯೊಳಾರಿಹರು
ಸುರಪತಿಯಂತೆ ಸುಖದಿಂ ಬಾಳುತೆ ಸೈಕಲ್ಲೇರ್ತಿಹೆನು

ಯಮ

(ಕೊಂಚ ಕಕ್ಕಾಬಿಕ್ಕಿಯಾಗಿ) ಓಹೋ, ಇತ್ತಕಡೆಯಿಂದ ಬಂದಿರೇನು ?

ನಾರದ

(ಬೈಸಿಕಲ್ಲಿನಿಂದ ಇಳಿದು) ಎಲೈ, ಯಮಧರ್ಮಾ ! ನನಗೆ ವಂದಿಸು.

ಯಮ

ಮುನಿಪುಂಗವಾ, ಇಗೋ ವಂದಿಸುವೆನು. ಈ ಬಾಲಕನನ್ನು ಆಶೀರ್ವದಿಸಬೇಕು, ಮಹಾಸಂಚಾರಿ.

ನಾರದ

(ಕಂಣು ಮುಚ್ಚಿ, ಕೈಚಾಚಿ) ದೀರ್ಘ ಸುಮಂಗಲೀಭವ.

(ಯಮದೂತರು ಖೊಳ್ಳೆಂದು ನಗುವರು.)

ಯಮ

ಇದೇನು ಮೌನೇಂದ್ರಾ, ಇಂದ್ರಲೋಕದಿಂದ ಬಂದಿರೇನು ? ತಮ್ಮ ಮುಂದೆ ನಿಂತಿರುವದು ನಾನು—ಯಮಧರ್ಮ. ಇಂದ್ರಲೋಕದ ಭೋಗ ಕನ್ನಿಕೆಯಲ್ಲ, ಮುನಿಮಾರ್ತಾಂಡಾ.

ನಾರದ

ಛೆ ಛೆ, ನಾರಾಯಣ ನಾರಾಯಣ. ನಿನ್ನನ್ನು ಏನೆಂದು ಆಶೀರ್ವದಿಸಲಿ ನಾರದಾ....ಅಲ್ಲ ಅಲ್ಲ....ಯಮರಾಯಾ ? ಕಾಮನ್‌ಸೆನ್ಸ್ ಕ್ರಾಸ್ ವರ್ಡ್ಸ್‌ನಲ್ಲಿ ಜಯಶೀಲನಾಗು.

ಯಮ

(ಹಿಂದಿರುವ ಕಬ್ಬಿಣದ ಕಿರ್ಲೋಸ್ಕರ ಕುರ್ಚಿಯ ಕಡೆ ಬೆರಳು ತೋರಿಸಿ) ಗುರುದೇವಾ ! ಈ ನನ್ನ ನವರತ್ನಖಚಿತವಾದ ಸಿಂಹಾಸನವನ್ನು ಅಲಂಕರಿಸಬೇಕು.

(ದೂತನು ಸೈಕಲ್ಲನ್ನು ತೆಗೆದುಕೊಂಡು ಸ್ಟ್ಯಾಂಡ ಹಾಕಿ ನಿಲ್ಲಿಸುವನು. ಕೈಯಲ್ಲಿಯ ಪಂಪು ಸಮೇತ ನಾರದರು ಸಿಂಹಾಸನವನ್ನು ಅಲಂಕರಿಸುವರು.)

ನಾರದಾಚಾರ್ಯರೇ ! ತಾವು ಸದಾ ಸೈಕಲ್ಲ ಸವಾರಿ ಸಂಚಾರಿಗಳು. ನಿಮಗೆ (ಕೆಳಗೆ ಕೈತೋರಿ) ಸ್ವರ್ಗಲೋಕ (ಮೇಲೆ ಕೈತೋರಿ) ಪಾತಾಳ ಲೋಕಗಳನ್ನೆಲ್ಲಾ ತಿರುತಿರುಗಿ ಬಹಳ ಬಾಯಾರಿಕೆಯಾಗಿರಬಹುದು. ಏನಾದರೂ ಸೋಡಾ ಅಥವಾ ಲಿಮನ್ ತರಿಸಲೇ. ತಾವು ಜಿಂಜರನ್ನಂತೂ ಎಂದೂ ಕುಡಿಯುವದಿಲ್ಲ. ತಮಗೆ ಉಳಿದಿರುವ ಶಕ್ತಿಯೆಂದರೆ ಜೀರ್ಣಶಕ್ತಿಯೊಂದೇ.

**ನಾರದ**

ನನಗೆ ಈ ಸೈಕಲ್ಲಸವಾರಿಯಿಂದ ದಣುವೆಂದರೇನು, ಯಮರಾಯಾ ? ಇಷ್ಟು ತಿರುಗಿದರೂ ನಾನೆಂದೂ ಒಂದು ತೊಟ್ಟು ಸಹ ಬೆಮರಿಲ್ಲ. ನನ್ನ ಮೈಯು ಸದಾ ಬೆಮರಿಲ್ಲದೆ ಸ್ವಚ್ಛವಿರುವದರಿಂದಲೆ ನನಗೆ ನಾರದಮುನಿ ಎಂಬ ಬಿರುದು ಬಂದಿದೆ. (ಹೆಮ್ಮೆಯಿಂದ) ಈ ಮುನಿಯು ಎಂದೆಂದಿಗೂ ನಾರುವದಿಲ್ಲ ತಿಳಿಯಿತೇ ? ಆದರೂ ಪರವಾ ಇಲ್ಲ, ಒಂದು ಡ್ರಿಂಕು ತರಿಸು.

**ಯಮ**

(ದೂತರನ್ನು ಕುರಿತು) ಯಾರಲ್ಲಿ ?

**೧ನೆ ದೂತ**

ಮಹಾಪ್ರಭೂ ಏನಪ್ಪಣೆ ?

**ಯಮ**

ಕ್ಷಿಪ್ರದಲ್ಲಿಯೇ ಒಂದು ಟಾಂಗಾದಲ್ಲಿ ಹೋಗಿ ಎರಡು ಡ್ರಿಂಕುಗಳನ್ನು ತೆಗೆದುಕೊಂಡು ಬಾ.

**೧ನೆ ದೂತ**

ಮಹಾಪ್ರಸಾದ (ಮಾಯವಾಗುವನು)

**೨ನೆ ದೂತ**

ಪ್ರಭೂ, ನಾನೂ ಹೋಗಿ ಡ್ರಿಂಕು ಒಡೆಯುವ ಒಂದು ಓಪನರ್ ತರುತ್ತೇನೆ.

### ಯಮ

(ಕೋಪದಿಂದ) ಏನೂ ಬೇಡ, ಬಾಯಿ ಮುಚ್ಚಿ ಬಿದ್ದಿರು · ಗುಲಾಮಾ. ಭೂಲೋಕಕ್ಕೆಂದರೆ ಎಲ್ಲರೂ ಒಂಟಿಗಾಲಿನ ಮೇಲೆಯೇ ನಿಂತಿರುತ್ತಾರೆ. (ನಾರದರನ್ನು ಕುರಿತು) ಯಮರಾಜಾ....ಅಲ್ಲ ಅಲ್ಲ....ಮುನೀಂದ್ರಾ, ತಾವು ದಿವಾಚರರು ಮತ್ತು ನಿಶಾಚರರು. ತಾವು ಅರಿಯದ ವಿಷಯವೇ ಇಲ್ಲ, ಲೋಕವೇ ಇಲ್ಲ. ಭೂಲೋಕದಲ್ಲಿ ಏನು ವಿಶೇಷ ನಾರದರೇ ? ಅದೇಕೆ ನನ್ನ ದೂತರು ಭೂಲೋಕವೆಂದಕೂಡಲೆ ಆನಂದದಿಂದ ಓಡುತ್ತಾರೆ.

### ನಾರದ

ಏನೆಂದು ಹೇಳಲಿ ಯಮಧರ್ಮ ? ಭೂಲೋಕವೆಲ್ಲವೂ ಸಂಪೂರ್ಣ ಯದ್ವಾ-ತದ್ವಾ ಆಗಿ ಕೆಟ್ಟು ಹಾಳಾಗಿ ಹೋಗಿದೆ. ಆ ಕುಬೇರನಂತೂ....

### ಯಮ

(ಮಧ್ಯದಲ್ಲಿಯೇ ಬಾಯಿಹಾಕಿ) ಹಾ, ಏನಂದಿರಿ, ಆ ನೀಚ ಕುಬೇರನೇ?

### ನಾರದ

ಅಹುದು ಯಮರಾಜಾ, ಆ ಕುಬೇರನ ಹಾವಳಿಯು ಹೇಳತೀರದಾಗಿದೆ. ಅವನ ಕತ್ತಿಗೆ ಎದುರೇ ಇಲ್ಲ ಅಲ್ಲಿ. ರಾಮ ರಾಮಾ ! ಅವನ ಬೆಂಬಲದಿಂದ ಮತ್ತು ಅವನ ಕೃಪೆಗಾಗಿ ಆಗುತ್ತಿರುವ ಅನ್ಯಾಯಗಳು ಒಂದೆರಡಲ್ಲ, ನೂರಾರಲ್ಲ ಯಮರಾಜಾ. ಸಹಸ್ರಾರು ಪಾಪಗಳು ನಡೆಯುತ್ತಿವೆ ಅವನಿಗಾಗಿ. ಅವನ ದಯೆಗಳಿಸಲು ಜನರು ಅಧಿಕಾರವನ್ನು ಬೇಡುತ್ತಿದ್ದಾರೆ. ಅಧಿಕಾರ ಸಂಪಾದನೆಗಾಗಿ ಬಕರಾನಂತಹ ಬಡವರನ್ನು ಬಲಿಕೊಡುತ್ತಿದ್ದಾರೆ. ಭೂಲೋಕದಲ್ಲಿ ಎಲ್ಲವೂ ಹುಚ್ಚಿಗಿಟ್ಟಿದೆ ಯಮರಾಯಾ. ದುಡಿಯುವವನೇ ದಡ್ಡ, ಮಾತನಾಡುವವನೇ ದೊಡ್ಡ. ಹತ್ತಿಯ ಹೊಲದಲ್ಲಿ ಕೆಲಸಮಾಡುವವನಿಗೆ ಮೈಗೆ ಬಟ್ಟೆ ಇಲ್ಲ, ಮನೆಯಲ್ಲಿ ಉಂಡು ಮಲಗುವ ಮಹಾವೀರರ ಬಾಗಿಲ ಕಿಟಕಿಗಳಿಗೆ ಪರದೆ ಇವೆ. ಜಾತಿಯ ಉಪಯೋಗವೂ ಅದಕ್ಕಾಗಿಯೇ, ನೀತಿಯ ಉಪಯೋಗವೂ ಅದಕ್ಕಾಗಿಯೆ.

### ಯಮ

ಅನ್ಯಾಯ ಅನ್ಯಾಯ !

**ನಾರದ**

ಇನ್ನೂ ಕೇಳು, ಯಮರಾಜಾ. ಕುಬೇರನಿಂದ ಆಗದ ಕೆಲಸವೇ ಇಲ್ಲ ಭೂಲೋಕದಲ್ಲಿ. ಅವನ ಮುಂದೆ ತಮ್ಮ ಆಟವೇ ಸಾಗದೆಂದು ಬೃಹಸ್ಪತಿ ವಿದುರರು ಅಳುತ್ತ ಕುಳಿತಿದ್ದಾರೆ.

**ಯಮ**

ಇದೇನು ಅನ್ಯಾಯ, ಮುನಿವರ್ಯಾ ? ವಿದುರ ಬೃಹಸ್ಪತಿಗಳಿಗುಂ ಈ ಗತಿಯೆ ?

**ನಾರದ**

ಕುಬೇರನ ಸಲುವಾಗಿ ಅಲ್ಲಿಯ ಜನರು ವಿದುರ ಬೃಹಸ್ಪತಿಗಳನ್ನು ಎಂದೋ ಎರಡಾಣೆಗೆ ಮಾರಿಬಿಟ್ಟಿದ್ದಾರೆ.

**ಯಮ**

ಇಂತಹ ನೀಚರೂ ಇದ್ದಾರೆಯೆ ಭೂಲೋಕದಲ್ಲಿ ? ಭೂಲೋಕವೆಂದರೆ ನೆನಪಾಯಿತು. ( **ದೂತನ ಕಡೆ ನೋಡಿ** ) ಇದೇನು, ತ್ರಿಂಕುತರಲು ಹೋದವನು ಇಷ್ಟು ಸಮಯವಾದರೂ ಬರಲಿಲ್ಲ.

**೨ನೆ ದೂತ**

( **ಆ ಬದಿ ಈ ಬದಿ ನೋಡಿ**) ಅಲ್ಲಿ ಬರುತ್ತಿರುವನು ಪ್ರಭೂ. ಐ! ನಡದೇ ಬರುತ್ತಿರುವನು........ಬರಿಗೈಯಿಂದಲೆ ಬರುತ್ತಿರುವನು ಮಹಾಪ್ರಭೂ.

**ಯಮ**

ನನಗಾಗಲೆ ಗೊತ್ತು. ಬರೀ ಕೆಲಸಕ್ಕೆ ಬಾರದ ಹೇಡಿಗಳು ಮಾತ್ರವೇ ನನ್ನ ಪಾಲಿಗೆ ಉಳಿದಿದ್ದಾರೆ. ಅದೇಕೆ ಮುನಿವರ್ಯಾ, ನನ್ನ ದೂತರೆಲ್ಲ ಭೂಲೋಕಕ್ಕೆ ಓಡುತ್ತಿದ್ದಾರೆ ?

**ನಾರದ**

ಗೊತ್ತಿಲ್ಲವೆ, ಇನ್ನೇಕೆ. ಆ ಕುಬೇರನ ಪಾರ್ಟಿಗೆ ಸೇರಿ ಮನಬಂದಂತೆ ಮೆರೆಯಲಿಕ್ಕೆ.

**೧ನೆ ದೂತ**

( **ಪ್ರವೇಶಿಸಿ** ) ಯಮಧರ್ಮ ಮಹಾರಾಜ್ಕೀ ಜೈ.

**ಯಮ**

ನಿನ್ನ ಜೈಗೆ ಬೆಂಕಿ ಹಾಕಿತು. ಡ್ರಿಂಕು ಏಕೋ ತರಲಿಲ್ಲ ?

**೧ನೆ ದೂತ**

ಪ್ರಭೂ, ನನ್ನ ಕಷ್ಟವನ್ನು ಎಷ್ಟೆಂದು ಹೇಳಲಿ ಮಹಾಪ್ರಭೂ ! ( ದಣುವಾರಿಸಿಗೊಳ್ಳುತ್ತ ) ನೋಡಾ ಕಂಪೆನಿಯ ಎಲ್ಲ ಡ್ರಿಂಕುಗಳನ್ನೂ— ಅದಾವ ಗೌಡರೋ ಮತ್ತು ಅದಾವ ರಾಯರೋ ಎಂದರು ಪ್ರಭೂ— ಅವರೇ ಎಲ್ಲವನ್ನೂ ಕೊಂಡು ಬಿಟ್ಟಿದ್ದಾರಂತೆ. ಎಷ್ಟಾದರೂ ಹಣ ತೆಗೆದುಕೊಂಡು ಎರಡೇ ಎರಡು ಕೊಡೋ ಎಂದು ಕೇಳಿಕೊಂಡೆ ಬುದ್ಧೀ ಅಂಗಡಿಯವನನ್ನು, ದೇವರಾಣೆ ಇಲ್ಲ ಎಂದು ಬಿಟ್ಟ. ಬರೀ ನಡೆದೇ ಹೋಗಿ ನಡೆದು ಬಂದೆ ಪ್ರಭೂ, ನನ್ನ ಕಾಲುಗಳು ನೋಯುತ್ತಿವೆ.

**ಯಮ**

ಅದೇಕೋ, ಟಾಂಗಾದಲ್ಲಿ ಏಕೆ ಬರಲಿಲ್ಲ ?

**೧ನೆ ದೂತ**

ಎಲ್ಲಿವೆ ದೇವರೂ ಟಾಂಗಾಗಳೂ ? ಅವನ್ನು ಸಹ ಆ ಗೌಡರು ರಾಯರುಗಳೇ ಗುತ್ತಿಗೆ ಹಿಡಿದು ಬಿಟ್ಟಿದ್ದಾರಂತೆ. ಆ ಸಿಟಿ ಬಸ್ಸುಗಳು ಬಂದ ಮೇಲೆ ಟಾಂಗಾದವರಿಗೆ ಬೀಡಿ ಸಹ ಇರಲಿಲ್ಲ. ಈಗ ಅದೇಕೊ ಒಮ್ಮೆಲೆ ಅವರಿಗೂ ಗಿರಾಕಿ ಬಂದುಬಿಟ್ಟಿದೆ.

**ಯಮ**

( ನಾರದನನ್ನು ಕುರಿತು )

ಇದೇನು ವಿಪರೀತ ಮುನಿಗಳೇ, ಭೂಲೋಕದಲ್ಲಿ ?

**ನಾರದ**

( ಟಕ್ಕನೆ ಕುರ್ಚ್ಯಾಸನದಿಂದ ಜಿಗಿದು) ಹಾ, ಮರೆತಿದ್ದೆ ಯಮರಾಜಾ. ನಾನು ಈ ತಕ್ಷಣವೆ ಭೂಲೋಕಕ್ಕೆ ಹೋಗಬೇಕು. ಇವತ್ತು ಅಲ್ಲಿ ಚುನಾವಣೆ. ನೀನಾದರೂ ಇಲ್ಲಿ ಏಕೆ ಸುಮ್ಮನೆ ಕೂಡುವಿ, ಉಗುರು ಕಡಿಯುತ್ತ. ಇಲ್ಲಿಗೆ ಭೂಲೋಕದಿಂದಲಂತೂ ಯಾರೂ ಬರುವದಿಲ್ಲ. ಮತವನ್ನು ಹಾಕುವ ವರೆಗೂ ಆ ಹುರಿಯಾಳುಗಳು ಅವರನ್ನು ಹೇಗಾದರೂ ಮಾಡಿ ಉಳಿಸಿಗೊಳ್ಳುತ್ತಾರೆ; ಪೆನ್ಸಿಲಿಯನ್ ಕೊಟ್ಟು ಕೊಟ್ಟು ಕೊಲ್ಲುತ್ತಾರೆ. ನಾನಂತೂ ಹೋಗಲೇ ಬೇಕು, ಯಮರಾಯಾ. ನಾನಿಲ್ಲದ ಚುನಾವಣೆ ಚುನಾವಣೆಯೇ. ಇಗೋ ನಾಂ ಹೋಗುವೆ. ( ಸೈಕಲ್ಲ ಬಳಿ ಬರುವನು )

**ಯಮ**

ಪೋಗುವಿರಾ, ಪೋಗುವಿರಾ ?

( ಹಾಡು ) ರಾಗ ಶಹಾಸ-ತಿಪಟತಾಳ

ಪೋಗ ಬ್ಯಾಡವೋ ನಿಗಮಾಸುತ ಮಧುಕಿಗೆ
ಪೋಗದಿರೆಲೋ ಹರಿಯೇ ॥
ಪೋದರೆ ನೀ ಪುನರಾಗಮವೆಂದಿಗೋ
ಹ್ಯಾಗೆ ಜೀವಿಪೆನೊ ನಾಗಮರ್ಧನ ಕೃಷ್ಣಾ ॥

**ನಾರದ**

( ಹಿಂದಿನಿಂದ ಸೈಕಲ್ಲನ್ನು ಏರಿ ಕುಂಟುತ್ತ )

( ಹಾಡು )

ನಾ ಪೋಗೀ ಬರ್ಪೆ ನಾರಿಯರಿ
ನಾ ಪೋಗೀ ಬರ್ಪೆ ನಾರಿಯರಿ
ನಾ ಪೋಗೀ ಬರ್ಪೆ ನಾರಿಯರಿ
ಬಾಗೂವೆ ಶಿರವನಾ ।

(ನಾರದನ ನಿಷ್ಕ್ರಮಣ. ಯಮನು ಪಡದೆಯನ್ನು ನೋಡುತ್ತ ನಿಲ್ಲುವನು. ಅದು ಮೆಲ್ಲಮೆಲ್ಲನೆ ಬೀಳುವದು.)

೪

(ಯಮಲೋಕದ ಹೆಬ್ಬಾಗಿಲಲ್ಲಿ. ಶಂಖ ಚಕ್ರ ಗದಾ ಪದ್ಮ ಧಾರಿಯಾದ ದೇವರನ್ನು ಇಬ್ಬರು ಯಮದೂತರು ಹಳ್ಳಿಯ ಶಾಲೆಗೆ ಹುಡುಗರನ್ನು ತಂದಂತೆ ದರದರ ಎಳೆದು ತರುತ್ತಿರುವರು.)

**ದೇವರು**

(ದುಃಖಿಸಿ ಅಳುತ್ತ ಹಾಡುವನು)

ಕಾಮಿಸಿ ಬಂದೆನು ನಾನೂ ಮೋಹಿಸಿ ಬಂದೆನು ನಾನೂ
ಮತ್ತೊಮ್ಮೆ ಕಾಮಿಸಿ ಬಂದೆನು ನಾನೂ ಮೋಹಿಸಿ ಬಂದೆನು ನಾನೂ

(ಕುರ್ಚ್ಯಾಸನದಲ್ಲಿ ಪತ್ರಿಕೆ ಓದುತ್ತ ಕುಳಿತಿದ್ದ ಯಮನ ಮುಂದೆ ತಂದು ನಿಲ್ಲಿಸುವರು.)

**೩ನೆ ಮತ್ತು ೪ನೆ ದೂತರು**

ಯಮಧರ್ಮ ಮಹಾಜ್ಕೀ ಜೈ.

**ಯಮ**

(ಕುಪಿತನಾಗಿ) ಇಲ್ಲಿಯೂ ಏಕೋ ಆ ಹಾಳು ಹಿಂದಿ ? ಕನ್ನಡದಲ್ಲಿ, ಜಯವಾಗಲಿ ಎಂದು ಬೊಗಳಿದರೆ ಆಗದೇ ?

**೩ನೆ ಮತ್ತು ೪ನೆ ದೂತರು**

ಯಮಧರ್ಮ ಮಹಾರಾಜ್ಕೀ—ಕನ್ನಡದಲ್ಲಿ ಜಯವಾಗಲಿ.

**ಯಮ**

( ಸಿಟ್ಟಿನಿಂದ ಸಿಡಿಪಿಡಿ ಮಾಡುತ್ತ ) ನಿಮ್ಮ ಶ್ರಾದ್ಧ ! ಹೂ, ಹೋಗಲಿ. ಸೇವಕಾ, ಮಹದ್ವಾರದಲ್ಲಿ ಸದ್ದು ಮಾಡಲು ಕಾರಣವೇನು ?

**೩ನೆ ದೂತ**

ಮಹಾಪ್ರಭೂ, ಭೂಲೋಕದಲ್ಲಿ ಆತ್ಮಹತ್ಯ ಮಾಡಿಕೊಂಡು ಸತ್ತ ನೀಚನೊಬ್ಬನನ್ನು ತಂದಿದ್ದೇವೆ.

**ಯಮ**

ಅವನನ್ನು ಮರ್ಯಾದೆಯಿಂದ ಒಳಗೆ ಬಿಡು. ಓಹೋ, ಇಲ್ಲಿಯೇ ನಿಂತಿರುವನೇನು. ಎಲೈ, ದೂತಾವಶೇಷಗಳೇ ! ಆ ಸೋಮಾರಿ ಶಿರೋ ಮಣಿಗಳಾದ ಚಿತ್ರಗುಪ್ತರನ್ನು ಬರಮಾಡಿರಿ.

**೪ ನೆ ದೂತ**

ಮಹಾಪ್ರಭೂ, ಆ ಕಾರಕೂನರಿಬ್ಬರೂ ತುಟ್ಟಿಭತ್ತೆಯ ಆಸೆಗಾಗಿ ಭೂಲೋಕಕ್ಕೆ ಓಡಿಹೋದರು. ಅವರಾರೂ ಇಲ್ಲ.

**ಯಮ**

ಬಹಳ ಚೆನ್ನಾಯಿತು, ಎಲ್ಲವೂ ಯದ್ವಾ ತದ್ವಾ ಆದಂತಿದೆ. ಇರಲಿ, ಈ ಪಾಪಿಯ ಕತೆ ಏನಂತೆ ?

**೩ನೆ ದೂತ**

ಪ್ರಭೂ, ಆತ್ಮಹತ್ಯದಿಂದ ಸತ್ತ ಇವನಿಗೆ ದೇವರ ದೆವ್ವವು ಬಡಿದು ಕೊಂಡಂತಿದೆ. ಇವನೊಬ್ಬ ಯಾವುದೋ ನಾಟಕ ಕಂಪನಿಯಲ್ಲಿ ಬಹುದಿನ ಗಳಿಂದ ದೇವರ ಪಾರ್ಟು ಮಾಡಿದವನಿರಬೇಕು. ಆದಕಾರಣ ತಾನೇ ಸ್ವತಃ ದೇವರೆಂಬ ಭ್ರಮೆಯಾಗಿ ಬಿಟ್ಟಿದೆ ಈ ನರಾಧಮನಿಗೆ. ಇಲ್ಲವೆ ಬುದ್ಧಿಪೂರ್ವಕ ಠಕ್ಕು ಮಾಡುತ್ತಿದ್ದಾನೆ. ಇವನನ್ನು ತಾವೇ ವಿಚಾರಿಸಿರಿ.

**ಯಮ**

( ದೇವರನ್ನು ಕುರಿತು ದರ್ಪದಿಂದ ) ಎಲೈ ಭೂಲೋಕದ ನರ ಮನು ಷ್ಯನೇ ! ನಿನ್ನ ವೃತ್ತಾಂತವೇನು ? ಆತ್ಮಹತ್ಯವನ್ನೇಕೆ ಮಾಡಿಕೊಂಡಿ ನೀನಾರು ?

**ದೇವರು**

ನಾನು ದೇವರು.

**ಯಮ**

ಅಹುದೋ, ನಿನ್ನನ್ನೆ ಕೇಳಿದ್ದು. ನೀನು ಯಾರೋ ?

**ದೇವರು**

ಆಗಲೆ ಹೇಳಿದೆನಲ್ಲ, ನಾನು ಶಂಖ-ಚಕ್ರ-ಗದಾ-ಪದ್ಮಧಾರಿಯಾ ದೇವರು.

**ಯಮ**

( ಲೇವಡಿಯ ದನಿಯಲ್ಲಿ ) ಏನು ? ನೀನು ಸಿದ್ಧಕಲ್ಪಮಕರಧ್ವಜನೇ ( ಗಂಭೀರವಾಗಿ ) ನನ್ನನ್ನು ಮೋಸಗೊಳಿಸಲಾರಿ, ತಿಳಿಯಿತೇ ? ನಿಜವನ ಬೇಗನೆ ಬೊಗಳುವಂಥಾತ್ತನಾಗು.

**ದೇವರು**

(ದುಃಖದಿಂದ) ಇನ್ನೇನು ಬೊಗಳಲಿ ಯಮೂ, ದೇವರಾಣೆಯಾ ನಾನು ಸಾಕ್ಷಾತ್ ದೇವರು. ನನಗೆ ಬಂದ ದುರ್ದಶೆಯನ್ನು ಹೇಳಿಕೊಳ್ಳ ನನಗೇ ನಾಚಿಕೆಯಾಗಿದೆ. ಎಂತೆಂತಹ ಪರಾಕ್ರಮಶಾಲಿಗಳೂ ರಾಕ್ಷಸಾ ಮರೂ ಆದ ಅಶ್ವತ್ಥಾಮ, ಬಲಿ, ವ್ಯಾಸ, ಹನುಮ, ವಿಭೀಷಣರನ್ನು ಕೊಂ ಪರಾಕ್ರಮಿ ನಾನು. ಆದರೆ ಭೂಲೋಕದಲ್ಲಿ ನನ್ನ ಹೆಸರಿನಲ್ಲಿ ಅನ್ಯಾಯಗಳನ ಮಾಡುತ್ತಿರುವ ಕುಬೇರನ ಕುಲದವರನ್ನು ಏನೂ ಮಾಡಲಾಗಲಿಲ್ಲ. ಆ ನೀ ಕುಬೇರನ ಅತಿ ಆಕ್ರಮಣಾಕಾಂಕ್ಷೆಯನ್ನು ಕಂಡು ನನಗೆ ಜೀವವೇ ಹೇಸಿ ಎನಿಸಿತು. ಅಲ್ಲದೆ ಇನ್ನೊಂದು ಯಮೂ, ಒಬ್ಬ ಮಹರಾಯ—ಕನ್ನ ಶಾಲೆಯ ಮಾಸ್ತರನಂತೆ, ಮಕ್ಕಳಿಗೂ ಅದೇ ಪುರಾಣವನ್ನು ಕಲಿಸಿದನೆ ಏನೋ—ನನ್ನನ್ನು ಪೌರಾಣಿಕವಾಗಿ ಬೈದು ಬೈದು ಹೇಗೆ ಹೇಗೆ ಹೀಯಾಳಿ ದನು ಗೊತ್ತೆ ? ಭೂಲೋಕದಲ್ಲಿ ಬೈಯುವ ಸಲುವಾಗಿಯೇ ಈ ಮ ಹುಟ್ಟಿರುವ ಯಾವ ಗಟಾರ ಪತ್ರಿಕೆಯೂ ಹಾಗೆ ಬೈಯ್ಯಲಿಕ್ಕಿಲ್ಲ. ನನ

ಇನ್ನಾವ ಅವ          ಗಬೇಕು ಹೇಳು ಯಮೂ. ಆ ಶಾಲಾ ಮಾಸ್ತರನಿಗೆ, ಪಾಪ ! ಆರು ತಿಂಗಳಿಂದ ಪಗಾರವೇ ಬಂದಿಲ್ಲವಂತೆ. ಅವನ ಬೋರ್ಡಿನ ಅಧ್ಯಕ್ಷರಿಗೆ ಹೇಳಿ ಎಲ್ಲ ಮಾಸ್ತರರಿಗೂ ಪ್ರತಿತಿಂಗಳೂ ಪಗಾರ ಬರುವಂತೆ ಮಾಡುವಂತೆ ನನ್ನ ಕೈಯಿಂದಾಗುವದಿಲ್ಲವಂತೆ. ಅದೇನೊ ನಿಜ, ನಾನೇನು ಆ ಬೋರ್ಡಿನ ಮೆಂಬರ ಅಲ್ಲ. ನನ್ನ ಮಾತನ್ನು ಅಲ್ಲಿ ಯಾರು ಕೇಳಬೇಕು. ( ಅಳುತ್ತ ) ಆ ಚಾಂಡಾಲ ಶಾಲಾಮಾಸ್ತರು ಇನ್ನೊಂದು ಮಾತನ್ನು ಅಂದ ಯಮೂ. ಅದನ್ನು ಮಾತ್ರ ನಾನು ಸತ್ತಮೇಲೂ ಮರೆಯಲಾರೆ.

**ಯಮ**

(ಕೆಳಗಿಳಿದು ಬಂದು ಬೆನ್ನಮೇಲೆ ಕೈಯಾಡಿ ಸಮಾಧಾನಗೊಳಿಸುತ್ತ) ಏನಂದ ದೇವ್ರೂ, ಏನಂದ ?

**ದೇವರು**

(ದುಃಖವನ್ನು ತಡೆಯುಲಾರದೆ) ಅನ್ನಬಾರದ್ದನ್ನೆಲ್ಲ ಅಂದುಬಿಟ್ಟ ಯಮೂ ಒಂದೇ ಮಾತಿನಲ್ಲಿ ನನ್ನನ್ನು ಅಪಮಾನ ಮಾಡಿದ ಆ ಅಸ್ನಕ್ಕಿಲ್ಲದ ಮಾಸ್ತರ. ನನ್ನಕ್ಕಿಂತಲೂ....ಬೇಡ ಬಿಡು ಯಮೂ, ನನ್ನ ಬಾಯಿಂದ ಆ ಮಾತುಗಳನ್ನು ಏಕೆ ಆಡಿಸುತ್ತಿ ?

**ಯಮ**

(ರಮಿಸುವ ದನಿಯಲ್ಲಿ) ಇರಲಿ ಹೇಳು ದೇವ್ರೂ,ಅವನು ಅಂದದ್ದಾದರೂ ಏನು. ನಮ್ಮ ಬಗ್ಗೆ ಇತರರು ಏನು ಅನ್ನುತ್ತಿದ್ದಾರೆಂಬುದನ್ನೂ ನಾವು ತಿಳಿದಿರಬೇಕು.

**ದೇವರು**

(ದೊಡ್ಡದನಿ ತೆಗೆದು ಅಳುತ್ತ) ನಿನ್ನಕಿಂತಲೂ ನಮ್ಮೂರ ಮೇಂಬರಾದ ದಾಣಿ ಕೊಟ್ರಪ್ಪ ಮೇಲು ಎಂದುಬಿಟ್ಟ. ಅದಕ್ಕಾಗಿಯೆ ಯಮೂ, ನಾನು ಆತ್ಮಹತ್ಯ ಮಾಡಿಕೊಂಡು ಸತ್ತು ಬಿಟ್ಟೆ.

**ಯಮ**

(ದೇವರನ್ನು ಅಪ್ಪಿಕೊಂಡು) ಏನು ದೇವರ ಲೀಲೆ, ಅಲ್ಲಾ....ಯಾರ ಲೀಲೆ ಎನ್ನಬೇಕೋ ತಿಳಿಯದಾಗಿದೆ. ನಿನಗೇ ಈ ಗತಿಯಾದ ಮೇಲೆ ನಮ್ಮಂತಹ ಅಸ್ಮದಾದಿಗಳ ಪಾಡೇನು ದೇವ್ರೂ. ನೀನೇನೊ ಸರ್ವಸ್ವತಂತ್ರ ಪುರುಷ, ಆತ್ಮಹತ್ಯ ಮಾಡಿಕೊಂಡು ಪಾರಾದಿ. ನನ್ನ ಗತಿ ಏನು ? ನಾನೂ ಆತ್ಮಹತ್ಯ

ಮಾಡಿಕೊಂಡರೆ ಬೇರಿನ್ನಾವ ಯಮನು ಬರುವನೋ ಬಲ್ಲವರಾರು ? ಯಾವ ಯಮನು ಬಂದರೆ ಮಾತ್ರ ಏನು ಇದೆ ಇಲ್ಲಿ? ಅಲ್ಲದೆ ನಾನಾದರೂ ಇಲ್ಲಿ ಇದ್ದು ಏನು ಮಾಡಬೇಕಾಗಿದೆ ? ಚಿತ್ರಗುಪ್ತರಂತೂ ಮೊದಲೇ ಇಲ್ಲ. ನನ್ನ ಘಾಂಡಿಗ ದೂತರಂತೂ ಯಾವಾಗಲೋ ಪರಾರಿಯಾಗಿದ್ದಾರೆ. ಅಲ್ಲ ದೇವ್ರೂ, ಪಾಪ ! ವಿದುರ ಬಹಳ ಕಷ್ಟದಲ್ಲಿದ್ದಾನಂತೆ.

**ದೇವರು**

(ಅಳುವ ದನಿಯಲ್ಲಿ) ಇನ್ನೆಲ್ಲಿಯ ವಿದುರ ಯಮೂ, ಭೂಲೋಕದವರು ಅವನನ್ನು ನಿತ್ಯವೂ ಕೊಲ್ಲುತ್ತಿದ್ದಾರೆ.

**ಯಮ**

ಅಳಬೇಡ ದೇವ್ರೂ, ಅಳಿಬೇಡ. ದೇವರು ಕಾಯುವನು..ಅಲ್ಲ..ಯಾರು ಕಾಯುವರೋ ದೇವರೇ ಬಲ್ಲ..ಅಲ್ಲ..ಯಾರಿಗೂ ಗೊತ್ತಿಲ್ಲ. ಆಯಿತು ಬಿಡು ದೇವ್ರೂ, ಆವನನ್ನು ಕರೆದುಕೊಂಡು ಎಲ್ಲಿಗಾದರೂ ಹೋಗಿಬಿಡೋಣ ಬಾ.

**ದೇವರು**

ಅಹುದು ಯಮೂ, ಇದು ಒಳ್ಳೆಯ ಉಪಾಯ. ಆದರೆ ಎಲ್ಲಿಗೆ ಹೋಗೋಣ ಹೇಳು; ಭೂಲೋಕದವರ ಕೈಗೆ ಮಾತ್ರ ಸಿಗದಂತೆ ಹೋಗ ಬೇಕು ನೋಡು.

**ಯಮ**

ಬೇರೆ ಇನ್ನೆಲ್ಲಿಗೆ ? ಆ ವಿದುರನ ನೀತಿಯನ್ನೂ ನನ್ನ ಧರ್ಮವನ್ನೂ ಹೊಟ್ಟೆಯಲ್ಲಿಟ್ಟುಕೊಂಡು ಡಿಕ್ಷನರಿ–ನಿಘಂಟುವಿನಲ್ಲಿ ಹಾಯಾಗಿ ಕುಳಿತು ಬಿಡು. ಯಾವಾಗಲಾದರೂ ಭೂಲೋಕವನ್ನು ನೋಡಬೇಕೆಂಬ ಚಪಲ ವಾದಾಗ ಯಾರಾದರೂ ಮೂರ್ಖರ ಮೈಮೇಲೆ ಕಳ್ಳತನದಿಂದ ಬಂದು ನಾಲ್ಕು ಸುಳ್ಳನ್ನಾಡಿ ಓಡಿ ಹೋಗು.

**ದೇವರು**

ಆಹುದು, ಯಮೂ ಇದು ಒಳ್ಳೆಯ ಉಪಾಯ.ನನ್ನ ಪ್ರಾಣಕ್ಕೆ(ಕೈಲಿದ್ದ ಶಂಖ ಚಕ್ರ ಗದಾ ಪದ್ಮಗಳನ್ನು ತೋರಿ) ಇವು ಬೇರೆ ಇವೆಯಲ್ಲ. ಇವನ್ನೇನು ಮಾಡಲಿ.

**ಯಮ**

ಎಲೈ ದೂತರೇ ! ಇಂದಿನಿಂದ ಇನ್ನುಮೇಲೆ ಯಮಲೋಕವಿಲ್ಲ. ನೀವೆಲ್ಲರೂ ಭೂಲೋಕಕ್ಕೆ ಹೋಗಿ ಜನತಾಸೇವೆಯನ್ನು ಮಾಡಿರಿ. ಅವರ ಅನ್ನವನ್ನು ಉಂಡು ಅವರಿಗೇ ಬಾಧೆ ಕೊಡುತ್ತ ದುಡಿಯದೆ ದುಂಡಾಗಿ ಸುಖವಾಗಿ ಬಾಳಿರಿ.

**ನಾಲ್ಕು ದೂತರು**

(ಆನಂದದಿಂದ) ಮಹದಾಜ್ಞೆ ಪ್ರಭೂ.

**ದೇವರು**

(ಶಂಖ-ಚಕ್ರ ಗದಾ ಪದ್ಮಗಳನ್ನು ಅವರ ಮುಂದೆ ಎಸೆದು) ಇವನ್ನೂ ಸಹ ತೆಗೆದುಕೊಂಡು ಹೋಗಿರಿ ನಿಮ್ಮೊಡನೆ.

(ದೂತರು ಒಂದೊಂದನ್ನು ಕೈಲಿ ಹಿಡಿದು ಸಾಲಾಗಿ ನಿಲ್ಲುವರು)

**೧ನೆ ದೂತ**

ಪ್ರಭೂ ಈ ಚಕ್ರವನ್ನು ಏನು ಮಾಡಲಿ ?

**ಯಮ**

ಭೂಲೋಕದಲ್ಲಿ ಹೇಗೂ ಎಲ್ಲವು ಯದ್ವಾ-ತದ್ವಾ ಆಗಿದೆ.ಆ ಚಕ್ರವನ್ನು ದುಡಿಯುವ ಬಡಪಾಯಿಗಳ ಹೊಟ್ಟೆಗೆ ಹಾಕಿಬಿಡು.

**೨ನೆ ದೂತ**

ಈ ಶಂಖವನ್ನು ಪ್ರಭೂ.

**ಯಮ**

ಅದೂ ಗೊತ್ತಿಲ್ಲವೇನೋ ? ಹೊಟ್ಟೆಗೆ ಚಕ್ರವು ಬಿದ್ದಮೇಲೆ ಕೈಗೆ ಶಂಖವನ್ನೂ ತಾವೇ ತೆಗೆದುಕೊಳ್ಳುತ್ತಾರೆ.

**೩ನೆ ದೂತ**

ಈ ಪದ್ಮವನ್ನು ಪ್ರಭೂ ?

**ಯಮ**

ಅದರಿಂದೇನೂ ಪ್ರಯೋಜನವಿಲ್ಲ. ಯಾರಾದರೂ ಶಾಲೆಯ ಹುಡಿಗಿಯರಿಗೆ ಕೊಡು. ಚಿತ್ರಗಳನ್ನು ಬಿಡಿಸುತ್ತ ಕೂಡಲಿ.

**೪ನೆ ದೂತ**

ಯಮದೇವಾ, ಈ ಗದೆಯನ್ನು ಏನು ಮಾಡಬೇಕು?

**ಯಮ**

ಚೆನ್ನಾಗಿ ಮುರಿದು ತುಂಡುಗಳನ್ನು ಮಾಡಿ ತಿಂಮನಂತಹ ತಲೆತಿರುಕರಿಗೆ ಕೊಡು. ಅದರಿಂದ ಲೆಕ್ಕಣಿಕೆಗಳನ್ನು ಮಾಡಿಕೊಂಡು ಯದ್ವಾತದ್ವಾ ನಾಟಕಗಳನ್ನು ಬರೆಯಲಿ. (ದೇವರನ್ನು ಕುರಿತು) ಬಾ, ದೇವ್ರೂ ನಾವಿನ್ನು ಮಾಯವಾಗೋಣ.

(ಇಬ್ಬರೂ ಹೋಗುವರು)

**ನಾಲ್ಕು ದೂತರು**

ಬೊಲೋ ಕುಬೇರ ಮಹಾರಾಜ್ಕೀ ಜೈ.

